# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 22 ನವೆಂಬರ್ 15 ರಿಂದ 30–1998 ಪುಟಗಳು : 24 ರೂ. 5



[ಲೇಖನ ಒಳಪುಟಗಳಲ್ಲಿ]

ವೈದಿಕೇತರ ಸಂಪ್ರದಾಯದ ಪಳೆಯುಳಿಕೆಯಾದ ಜೋಗಿವೇಷ (ಸಿದ್ಧವೇಷ)ದ ಸನ್ಯಾಸಿ

—: : ಸಂಗಾತಿ ಓದುಗರಿಗೆ ಹುತ್ತರಿ ಹಬ್ಬದ ಶುಭಕಾಮನೆಗಳು : :—

With Best Wishes to Kodagu Sangathi mooving towards
3rd year 1999. "Keep it up"

From **KALLU MUTTLU FAMILY**

**Kallumuttlu BASAPPA RAMAPPA (JAYA)**
Managar/Accounts-Samitan Electro Powers Pvt. Ltd.

**AND**

**ROOPA BASAPPA**
(Sub Registar Office, Basavanagudi)

Residence Address:

No. 233/9, II Cross, Nanjappa Block,
(Opp. Water Tank) Kempegowda Nagar
Bangalore-560 019.

**Kallumuttlu M. RAMAPPA**, Rtd. Head Constable

**AND**

**AMMAVVA RAMAPPA**
**R. SOMAIAH (NANI)**

Address : Kallumuttlu House, Kanthur Village
Murnad Post, Madikeri Taluk,
Kodagu Dist. Pin. 571252.

---



ಅಮ್ಮಾಜೀರ ಪೊನ್ನಪ್ಪ ಮತ್ತು
ಲೀಲಾವತಿ ಬೆಂಗಳೂರು

ಕೊಡಗು ಸಂಗಾತಿಯ ಮೂಲ ಧ್ಯೇಯೋದ್ದೇಶಗಳನ್ನು "ಪೊನಿಧ್ವನಿ" ಹಾಡಿನ ಧ್ವನಿ ಸುರುಳಿಯ ಮೂಲಕ ಕೊಡಗಿನ ಮೂಲೆ ಮೂಲೆಗೂ. ಅರೆಭಾಷಿಕರ ಮನೆ ಮನೆಗೂ ಕೊಂಡೊಯ್ದು, ಜನಾಂಗದ ಹಿರಿಮೆಯನ್ನು ಸಾರಿ ಪ್ರಚುರ ಪಡಿಸುತ್ತಿರುವ ನಮ್ಮ ನೆಚ್ಚಿನ ದಂಪತಿಗಳಿಗೆ ನಮ್ಮ ನಮನಗಳು

**—ಸಂಪಾದಕಿ ಮತ್ತು ಸಂಗಾತಿ ಬಳಗ, ಮೈಸೂರು.**

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**
ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**
ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :
**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು-12.
ಫೋನ್ : 0821/516771

**-ಸಂಪರ್ಕಿಸುವ ವಿಳಾಸ-**

**ಮಣಿ ಸಂಗಾರ್**
C/o ಸಂಗಾರ್ ಆಡಿಯೋ & ವೀಡಿಯೋ
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ-571 201
ದೂರವಾಣಿ : 08272/29372

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 16, ಎಲ್.ಐ.ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ-571237

**ಅಮ್ಮಾಜೀರ ಪೊನ್ನಪ್ಪ ಅಥವಾ**
**ಕಲ್ಲುಮುಟ್ಲು ಬಸಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು-04
ದೂರವಾಣಿ-080/642822


## ಒಳನೋಟ

ಪುಟಗಳು



## ಅರೆ ಭಾಷೆರ ವಿಭಾಗ




**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ :

## ಮುಂದಾಳುಗಳ ಕೊರತೆ

**ಕೊ**ಡಗಿನಲ್ಲಾಗಲೀ, ದಕ್ಷಿಣ ಕನ್ನಡ ಜಿಲ್ಲೆಯಲ್ಲಾಗಲೀ ಗೌಡರಲ್ಲಿ ಮುಂದಾಳುತನದ ಕೊರತೆ ಇದೆ. ಇದು ರಾಜಕೀಯ ದಲ್ಲೂ ಇರಬಹುದು. ಸಾಮಾಜಿಕವಾಗಿಯೂ ಇರಬಹುದು. ಮುಂದಾಳು ಸ್ವಾಭಾವಿಕವಾಗಿ ಮುಂದಾಳು ಆಗಿರಬೇಕು. ಉದಾಹರಣೆಗೆ ಸ್ವಾಮಿ ವಿವೇಕಾನಂದರು, ಮಹಾತ್ಮಾಗಾಂಧಿ, ಸುಭಾಸ್ ಚಂದ್ರ ಭೋಸ್, ಜವಾಹರಲಾಲ್ ನೆಹರು, ಕೊಡ ಗಿನ ಗೌಡರಲ್ಲಿ ದಿ|| ನಿಡ್ಯಮಲೆ ಮುದ್ದಪ್ಪನವರು ದಿ|| ನಿಡ್ಯಮಲೆ ಸೋಮಣ್ಣನವರು ಸ್ವಾಭಾವಿಕವಾದ ಗೌಡರ ಮುಖಂಡರಾಗಿ ದ್ದರು. ಅವರ ನಂತರ ಯಾರೊಬ್ಬರೂ ಅವರಷ್ಟು ಎತ್ತರವಾಗಿ ಸಾಮಾಜಿಕವಾಗಿಯೂ, ರಾಜಕೀಯವಾಗಿಯೂ ಬೆಳೆದಿಲ್ಲ. ಅದೇ ರೀತಿ ಕೊಡಗಿನ ರಾಜಕೀಯದಲ್ಲಿ ದಿ|| ಪಂದ್ಯಂಡ ಬೆಳ್ಯಪ್ಪ ದಿ|| ಚಪ್ಪುಡಿರ ಪೂಣಚ್ಚ, ದಿ|| ನಿಡ್ಯಮಲೆ ಸೋಮಣ್ಣ, ದಿ|| ಕಿತ್ತೂರು ಮಲ್ಲಪ್ಪ, ಗುಂಡುಕುಟ್ಟಿ ಮಂಜುನಾಥಯ್ಯನವರಂತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಿ|| ಕೂಜುಗೋಡು ವೆಂಕಟರಮಣ ಗೌಡರಂತೆ, ಗೌಡರಲ್ಲೂ ಟಿ.ಎ. ಪೈ, ಕೆ.ಆರ್. ಕಾರಂತ, ಡಾ|| ನಾಗಪ್ಪ ಆಳ್ವ, ಕೆ. ಎಸ್. ಹೆಗ್ಗಡೆಯವರಂತೆ ಸ್ವಾಭಾವಿಕ ಮುಂದಾಳುಗಳನ್ನು ಕಾಣಲು ಅಪರೂಪವಾಗಿದೆ.

ಮುಂದಾಳುಗಳು ತಮ್ಮ ನಂತರ ತಮ್ಮನ್ನು ಹಿಂಬಾಲಿ ಸುವ ಹಿಂಬಾಲಕರೂ ಸಹ ನಾಯಕರಾಗಬೇಕೆಂಬ ಭಾವನೆ ಇರದೆ ತಮ್ಮ ಹಿಂಬಾಲಕರೇನಾದರೂ ತಮಗಿಂತ ಎತ್ತರಕ್ಕೆ ಹೋಗಿ ತಮ್ಮನ್ನೇ ತುಳಿದಾರೆಂಬ ಭಾವನೆಯಿಂದ ಅವರ ಹಿಂಬಾ ಲಕರನ್ನೇ ತುಳಿಯುವುದರಿಂದ ಒಬ್ಬ ಮುಂದಾಳು, ನಂತರ ಇನ್ನೊಬ್ಬ ಮುಂದಾಳು ಮೇಲೆ ಬರುವುದು ಕಷ್ಟವಾಗಿದೆ. ಉದಾಹರಣೆಗೆ ಶ್ರೀ ರಾಮಕೃಷ್ಣ ಪರಮಹಂಸರು ಶ್ರೀ ಸ್ವಾಮಿ ವಿವೇಕಾನಂದರನ್ನು ತಮ್ಮ ತಪಸ್ಸಿನ ಫಲವನ್ನು ಧಾರೆಯೆರೆ ದಂತೆ ಮಹಾತ್ಮ ಗಾಂಧೀಜಿಯವರು ತಮ್ಮ ರಾಜಕೀಯ ಶಿಷ್ಯ ರಾದ ಪಂಡಿತ್ ಜವಹರಲಾಲ್ ನೆಹರುರವರಿಗೆ ಪ್ರೋತ್ಸಾಹಿಸಿ ದಂತೆ, ನಿರ್ದೇಶನ ಕೊಡುವವರಿಲ್ಲದ್ದರಿಂದ ಮುಂದಾಳುಗಳ ಬೆಳ ವಣಿಗೆ ಇಲ್ಲದಾಗಿದೆ. ಇದು ಗೌಡರಲ್ಲಿ ಮಾತ್ರವಲ್ಲ ಕೊಡಗಿನಲ್ಲೂ ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಕರ್ನಾಟಕ ಹಾಗೂ ಭಾರತದ ಸ್ಥಿತಿಯಾಗಿದೆ. ಆದ್ದರಿಂದಲೇ ಜವಾಹರಲಾಲ್ ನೆಹರು ಹಾಗೂ ಇಂದಿರಗಾಂಧಿಯವರ ನಂತರ ಭಾರತದಲ್ಲಿ ಸ್ವಾಭಾವಿಕ ಮುಖಂ ಡರ ಕೊರತೆಯಿಂದ ಈಗ ನಮ್ಮ ರಾಷ್ಟ್ರದಲ್ಲಿ ಜನರನ್ನು ತಮ್ಮೊಂ ದಿಗೆ ಸೆಳೆಯುವ ವ್ಯಕ್ತಿತ್ವ ಇಲ್ಲದ ಮುಂದಾಳುಗಳಿಲ್ಲದಿರುವುದ ರಿಂದ ರಾಷ್ಟ್ರದಲ್ಲೂ, ರಾಜ್ಯದಲ್ಲೂ ಸ್ಥಿರವಾದ ಸರಕಾರ ಇಲ್ಲ ದಾಗಿದೆ. ಗೌಡರೂ ಈ ರೀತಿ ಮುಂದಾಳುಗಳನ್ನು ರಾಜಕೀಯ ದಲ್ಲೂ, ಸಮಾಜದಲ್ಲೂ ತಯಾರು ಮಾಡಲು ಸಾಧ್ಯವಿಲ್ಲವೇ ಎಂದು ಸಂಗಾತಿಯ ಪ್ರಶ್ನೆ.

## ಗ್ರಹ ಸಂಗಾತಿ

**ಕೃತ್ತಿಕಾ–3**

1ನೇ ಪಾದಕ್ಕೆ ಮೇಷ ರಾಶಿ, ಉಳಿದ ಮೂರು ಪಾದಕ್ಕೆ ವೃಷಭ ರಾಶಿ, ರಾಜಾಧಿಪತಿ ಶುಕ್ರ. ಈ ನಕ್ಷತ್ರದ 1ನೇ ಪಾದಕ್ಕೆ ಧನುರಾಂಶವಾಗುವುದು. ಗುರು ಅಧಿಪತಿ. ಇದ ರಲ್ಲಿ ಜನಿಸಿದವನು ಕಾರ್ಯದಕ್ಷನೂ, ಜಾಣನೂ, ಬಂಧು ಪ್ರಿಯನೂ, ಪರೋಪಕಾರಿಯೂ, ಬಹುಜನ ಸೇವಕಉಳ್ಳವನೂ ಧನವಂತನೂ, ಕೀರ್ತಿಶಾಲಿಯೂ ಆಗುವನು. 2ನೇ ಪಾದಕ್ಕೆ ಮಕರಾಂಶವಾಗುವುದು. ಶನಿ ಆಧಿಪತಿ. ಇದರಲ್ಲಿ ಜನಿಸಿದ ವನೂ ಕರ್ತವ್ಯನಿಷ್ಟನೂ, ನಿಧಾನಿಯೂ, ಕೃಪಣನೂ, ಸ್ವಜನ ರಲ್ಲಿ ಅಪ್ರೀತಿಯುಳ್ಳವನೂ, ಗುಪ್ತ ಆಲೋಚನಗಾರನೂ, ಕಲಾ ಕುಶಲನೂ ಆಗುವನು. 3ನೇ ಪಾದಕ್ಕೆ ಕುಂಬಾಂಶವಾಗು ವುದು. ಶನಿ ಅಧಿಪತಿ. ಇದರಲ್ಲಿ ಜನಿಸಿದವನು ಕ್ರೂರನೂ ಸಿಟ್ಟಿನ ಸ್ವಭಾವದವನೂ, ದುರ್ವ್ಯಸನಿಯೂ, ಹಿಂಸಕನೂ, ಹೆರವರಿಗೆ ಕೇಡು ಬಗೆಯುವವನೂ, ದುರಾಚಾರಿಯೂ ಆಗು ವನು. 4ನೇ ಪಾದಕ್ಕೆ ಮೀನಾಂಶವಾಗುವುದು. ಗುರು ಅಧಿಪತಿ. ಇದರಲ್ಲಿ ಜನಿಸಿದವನು ವಿದ್ಯಾವಂತನೂ, ಹಣ ವಂತನೂ, ಕೀರ್ತಿಶಾಲಿಯೂ ಆಚಾರ ಶೀಲನೂ ಆಗುವನು.

### "ಈ ನಕ್ಷತ್ರದ ಸಾರಾಂಶ ಜಾತಕ ಫಲ"

ಈ ನಕ್ಷತ್ರದಲ್ಲಿ ಹುಟ್ಟಿದವನಿಗೆ 4ನೇ ತಿಂಗಳಲ್ಲಿ ಜ್ವರ ಬಾಧೆ. 1–2ನೇ ವರ್ಷದಲ್ಲಿ ಸಂದು ರೋಗ ಪೀಡೆ. 5–7 ಮತ್ತು 12ನೇ ವರ್ಷಗಳಲ್ಲಿ ಜ್ವರಪೀಡೆ. 20–21ನೇ ವರ್ಷ ಗಳಲ್ಲಿ ಜಲಭಯ. 35–40ನೇ ವರ್ಷಗಳಲ್ಲಿ ವಾಹನ ಭಯ. 60ನೇ ವರ್ಷದಲ್ಲಿ ಅಪಮೃತ್ಯು ಕಳೆದರೆ 70 ವರ್ಷ ಪರ ಮಾಯುಷ್ಯ.

---

## : ವಿವೇಕ ವಾಣಿ :

ಚಿನ್ನದ ನಾಣ್ಯ ದೊರೆಯುವುದು ಸಂಶಯವಿರುವಾಗ, ತಾಮ್ರದ ನಾಣ್ಯ ದೊರೆಯುವುದು ಖಚಿತವಾಗಿದ್ದರೆ, ಅದೇ ಲೇಸಲ್ಲವೇ ?

—ಲೋಕೋಕ್ತಿ.

# ದಿ|| ಪಳಂಗೋಟ್ ಬೆಳ್ಳಿಯಪ್ಪ ಅಮ್ಮಣ್ಣ ಬಿ.ಇ., ಎಂ.ಐ.ಇ.
# ನಿವೃತ್ತ ಸೂಪರಿಂಟೆಂಡೆಂಟ್ ಇಂಜಿನಿಯರ್

ಪಳಂಗೋಟ್ ಬೆಳ್ಳಿಯಪ್ಪ ಅಮ್ಮಣ್ಣ ನವರು ನಮ್ಮ ಜನಾಂಗದ ತೆರೆ ಮರೆಯ ವ್ಯಕ್ತಿ. ಸುಂದರ ಮೈಕಟ್ಟು, ನಗುಮುಖ, ಶಿಸ್ತಿನ ಸಿಪಾಯಿ. ಗಂಡು ಮೀಸೆಯ ಎಲ್ಲರ ನೆಚ್ಚಿಗೆ ಪಡೆದ ಗಂಡು. ಪಳಂಗೋಟ್ ಬೆಳ್ಳಿಯಪ್ಪನವರಿಗೆ 4 ಗಂಡು ಮಕ್ಕಳು. ಪೂವಯ್ಯ, ಸೋಮಪ್ಪ, ಅಮ್ಮಣ್ಣ ಮತ್ತು ಬಸಪ್ಪ. ಬೆಳ್ಳಿಯಪ್ಪ ನವರ ಮಕ್ಕಳಲ್ಲಿ ಅಮ್ಮಣ್ಣ ಮೂರನೆಯವರು.

ಹೇಳಿಕೊಳ್ಳುವಂತಾ ಶ್ರೀಮಂತಿಕೆ ಇಲ್ಲ. ಕೊರಗುವಂತಾ ಬಡತನವಿಲ್ಲ. ಆದರೆ ಆಸರೆಯ ಕೊರತೆ ಈ ಮಕ್ಕಳಿಗೆ. ಸಂಸಾರ ಸಾಗುತ್ತಿತ್ತು, ವಿದ್ಯಾಭ್ಯಾಸವೂ ಅಷ್ಟ ಕ್ಕಷ್ಟೇ ಸಾಗುತ್ತಿತ್ತು. ತಂದೆ ಬೆಳ್ಳಿಯಪ್ಪ ನವರು ಕಣ್ಣು ಮುಚ್ಚಿದರು. ಮಕ್ಕಳು ಚಿಕ್ಕತಂದೆಯವರ ಪಾಲಾದರು. ಹಾಗೆಯೇ ಕಷ್ಟಕ್ಕೀಡಾದರು. ಅಮ್ಮಣ್ಣನಲ್ಲಿ ವಿದ್ಯೆಯ ಬಲವಿತ್ತು. ಒಲವೂ ಇತ್ತು. ಕರುಣಾಳು ತಾಯಂದಿರ ನೆರವು ಪ್ರಯತ್ನದಿಂದ ವಿದ್ಯೆ ಸಾಗಿ ಬಂದಿತು ಅಮ್ಮಣ್ಣನವರಿಗೆ. ಅಮ್ಮಣ್ಣನವರು ಚೆಟ್ಟಿಮಾನಿ, ಪಾರಾಣೆ, ಭಾಗಮಂಡಲ, ನಾಪೋಕ್ಲುವಿನಲ್ಲಿ ಮೊದಲ ಹಂತದ ವಿದ್ಯೆ. ಬಹಳ ಕಷ್ಟ ಕರವಾದ ವಿದ್ಯೆ ಗಳಿಕೆ. ಆದರೂ ತನ್ನ ಸ್ವ–ಸಾಮರ್ಥ್ಯದಿಂದ ಬಿ. ಇ. ಪರೀಕ್ಷೆಯಲ್ಲಿ ತೇರ್ಗಡೆ. ನಂತರ ಎಂ.ಐ.ಇ.ಯ ಸೇರ್ಪಡೆ.

ಕರ್ನಾಟಕ ಸರಕಾರದ ಪಿ.ಡಬ್ಲ್ಯು ಡಿ. ಯಲ್ಲಿ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರಾಗಿ ರಾಯಚೂರು ಜಿಲ್ಲೆಗೆ ವರ್ಗಾವಣೆ. ನಂತರ ಬಿಜಾಪುರ, ಗುಲ್ಬರ್ಗಾ [ಧೀರ್ಘಕಾಲದ ಸೇವೆಗೆ] ಭೀಮರಾಯನ ಗುಡಿ ನಂತರ ಮೈಸೂರು ಪಿ.ಬಿ. ಅಮ್ಮಣ್ಣ ನವರ ಸೇವೆಯನ್ನು ಕೆಲವು ಕಾಲ ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಎರವಲು ಪಡೆದಿತ್ತು. ತಮ್ಮ ಸೇವೆಯ ಕೊನೆಯ ಹಂತದಲ್ಲಿ ಸೂಪರಿಂಟೆಂಡೆಂಟ್ ಇಂಜಿನಿಯರಾಗಿ ನಿವೃತ್ತಿ ಹೊಂದಿದರು.



ಜನನ : 15–4–1936

ಮರಣ : 18–9–1998

ಅಮ್ಮಣ್ಣನವರಿಗೆ ಎರಡು ಹೆಣ್ಣು, ಒಂದು ಗಂಡು ಮಕ್ಕಳು. ಹೆಣ್ಣು ಮಕ್ಕಳು ವಿದ್ಯಾವಂತರಾದರು. ಗಂಡು ಮಗ ಅರ್ಧಕ್ಕೆ ಇಂಜಿನಿಯರನ್ನು ನಿಲ್ಲಿಸಿದ. ಅಮ್ಮಣ್ಣನವರ ಬಾಳಿಗೆ ಬೆಳಕಾಗಿ, ಮನಕ್ಕೆ ಪ್ರಕಾಶವಾಗಿ, ಸಂಸಾರಕ್ಕೆ ಗೃಹಲಕ್ಷ್ಮಿಯಾಗಿ, ಪತಿಗೆ ಪತ್ನಿ ಎಂಬ ನಾಮದಲ್ಲಿ ಜೀವನ ಸಂಗಾತಿಯಾದವಳು ಕುಯ್ಯಮುಡಿ ಅಣ್ಣಯ್ಯನವರ ಸುಪುತ್ರಿ ಗೌರಮ್ಮ ಹೆಸರಿಗೆ ತಕ್ಕಂತೆ ಗೌರಮ್ಮ, ಗೌರವತಿ, ಗೌರಿಬಣ್ಣವತಿ, ಅಷ್ಟೇ ಮೃದು ಹೃದಯವತಿ. ಸ್ತ್ರೀಯರಲ್ಲಿರತಕ್ಕಂತಾ ಸಾಧಾರಣ ಸ್ತ್ರೀತ್ವ, ಸ್ತ್ರೀಗುಣ, ಅವರಲ್ಲಿ ಮನೆ ಮಾಡಿಕೊಂಡಿದೆ. ಹೀಗೆ ಅನ್ಯೋನ್ಯವಾಗಿ ಬಾಳಿದ ಸಂಸಾರ ಅಮ್ಮಣ್ಣನವರದ್ದು.

ಶ್ರೀ ಪಿ. ಬಿ. ಅಮ್ಮಣ್ಣನವರು ತನ್ನ ಸೇವಾ ಅವಧಿಯಲ್ಲಿ ನಮ್ಮ ಜನಾಂಗದ ಮಕ್ಕಳಿಗೆ ಬಹಳವಾಗಿ ಪ್ರೋತ್ಸಾಹ ಹಸ್ತವನ್ನು ನೀಡಿದವರು. ನಿವೃತ್ತರಾಗಿ ಕುಶಾಲನಗರದಲ್ಲಿ ಬಾಡಿಗೆ ಮನೆಯಲ್ಲಿ ವಾಸಿಸುತ್ತಿರುವಾಗ ನಮ್ಮ ಗೌಡ ಸಮಾಜದ ಓರ್ವ ಡೈರೆಕ್ಟರ್ ಮತ್ತು ಯಾಂತ್ರಿಕ ಸಲಹೆಗಾರರಾಗಿ ಕಾರ್ಯ ನಿರ್ವಹಿಸಿದರು. ತನ್ನ ಜೀವನದ ಕೊನೆಯಲ್ಲಿ ಕುಶಾಲನಗರದಲ್ಲಿ ಸುಂದರವಾದ, ವಿಸ್ತಾರವಾದ ಸ್ವಂತ ಮನೆಯನ್ನು ನಿರ್ಮಿಸಿ ಪತ್ನಿಯೊಂದಿಗೆ ಗೃಹ ಪ್ರವೇಶಿಸಿ, ಹೆಚ್ಚು ಕಡಿಮೆ ಮೂರು ತಿಂಗಳಲ್ಲಿ ತನ್ನ ಸ್ವಗೃಹವನ್ನು ಗೃಹಲಕ್ಷ್ಮಿಯನ್ನು ತ್ಯಜಿಸಿ ಪರಮಾತ್ಮನ ಪಾದವನ್ನು ಸೇರಿಕೊಂಡರು. ಅವರ ಆತ್ಮಕ್ಕೆ ಶಾಂತಿ ಬಯಸುವ.

ಅಮ್ಮಣ್ಣನವರ ಸಾವಿನಲ್ಲಿ ಕಂಡುಬಂದ ಒಂದು ಕೊರತೆ. ಅವರ ಮಗ ಬಾರದ ಕೊರತೆ. ತನ್ನ ಒಬ್ಬ ಮಗನನ್ನು ಅಕ್ಕರೆಯಿಂದ ಸಾಕಿದರು. ಮಗನಿಗೆ ತನ್ನ ಜೀವಮಾನಕ್ಕೆ ಬೇಕಾದ್ದನ್ನು ಒದಗಿಸಿ ಕೊಟ್ಟರು. ಇಷ್ಟೆಲ್ಲಾ ಆದರೂ ತನ್ನ ಕೊನೆಗಳಿಗೆಯಲ್ಲಿ, ಅಂತ್ಯ ಕಾಲದಲ್ಲಿ ಮಗನಿಂದ ಪಡೆಯಬೇಕಿದ್ದ ಸಂಸ್ಕೃತಿ, ಸಂಪ್ರದಾಯ ಅವರಿಗೆ ದೊರಕಲಿಲ್ಲ. ಇದು ಅವರ ಕರ್ಮ. ಕರ್ಮ ಮಾಡಿದರು. ಫಲದ ಆಸೆ ಬಿಟ್ಟರು.

ನನಗೆ ವ್ಯಕ್ತಿಗಿಂತ ಸಮಾಜ ಮುಖ್ಯ. ವ್ಯಕ್ತಿ ಸಾಯಬಹುದು, ಸಮಾಜ ಸಾಯಬಾರದು. ಹುಟ್ಟುವುದು ಸಾಯಲಿಕ್ಕೆ. ಹುಟ್ಟು ಸಂಸ್ಕೃತಿಯಲ್ಲಿ, ಆಚರಣೆ ಸಂಪ್ರದಾಯದಲ್ಲಿ, ಗಳಿಕೆ ಬೆಳವಣಿಗೆ ಜನಾಂಗವೆಂಬ ಸಮಾಜದಲ್ಲಿ. ಹುಟ್ಟು ಸಾವಿನ ಮಧ್ಯದಲ್ಲಿ ನಮ್ಮ ಕರ್ತವ್ಯ ಸಮಾಜದಿಂದ ಸಮಾಜಕ್ಕಾಗಿ ಜನಾಂಗದ ಪ್ರತಿ ವ್ಯಕ್ತಿ

# ಹಿಂದುಳಿದ ಪಂಗಡದ ಪಟ್ಟಿ

ಕೊಡಗು ಸಂಗಾತಿಯ ಅಕ್ಟೋಬರ್ 16–31ರ ಪತ್ರಿಕೆಯಲ್ಲಿ ಶ್ರೀಮತಿ ಚೆಟ್ಟಿಮಾಡ ಪ್ರಭಾ ಕಾರ್ಯಪ್ಪನವರು ಬರೆದ ಲೇಖನವನ್ನು ಓದಿ ತುಂಬಾ ಸಂತೋಷವಾಯಿತು. ನಮ್ಮ ಸಮಾಜದಲ್ಲಿ ಜನರ ಸಂಕಷ್ಟಗಳಿಗೆ ಸ್ಪಂಧಿಸಿದ ರಾಜಕಾರಣಿಯರು ಹಾಗೂ ಸಮಾಜದ ಧುರೀಣರೂ ಆಗಿದ್ದ ದಿ|| ನಿಡ್ಯಮಲೆ ಸೋಮಣ್ಣನವರಿಗೆ ಇದ್ದ ಗೌಡ ಜನಾಂಗದ ಮೇಲಿನ ಹೃದಯ ಮಿಡಿತ ಅವರ ಪುತ್ರಿಯಾದ ಶ್ರೀಮತಿ ಪ್ರಭಾ ಕಾರ್ಯಪ್ಪನವರಿಗೂ ಇರುವುದು ಸಹಜವೇ ಆಗಿದೆ. ಶ್ರೀಮತಿ ಪ್ರಭಾ ಕಾರ್ಯಪ್ಪನವರು ಶ್ರಮಪಟ್ಟು ತಿಳಿಸಿರುವ ವಿಷಯ ಶ್ಲಾಘನೀಯವಾಗಿದೆ. ಈ ವಿಷಯದಲ್ಲಿ ದಿ|| ನಿಡ್ಯಮಲೆ ಸೋಮಣ್ಣನವರು ಲೋಕಸಭಾ ಸದಸ್ಯರಾಗಿದ್ದಾಗ 1952 ರಿಂದ 1956 ರವರೆಗೆ ಎಸ್. ಎಸ್. ಎಲ್. ಸಿ. ನಂತರದ ಎಲ್ಲಾ ಗೌಡ ವಿದ್ಯಾರ್ಥಿಗಳಿಗೆ ಅವರ ವಿದ್ಯಾಭ್ಯಾಸ ಮುಗಿಯುವವರೆಗೆ ಆಗಿನ ಕಾಲದಲ್ಲಿ ವರ್ಷಕ್ಕೆ 1250 ರೂ. ಕೇಂದ್ರ ಸರ್ಕಾರದ ವಿದ್ಯಾರ್ಥಿವೇತನ ಸಿಗುತ್ತಿತ್ತು. ಇದರ ಹಣದ ಬಲದಿಂದಲೇ ಕೆಲವು ವಿದ್ಯಾರ್ಥಿಗಳು ತಮ್ಮ ಓದನ್ನು ಮುಗಿಸಿ ನಮ್ಮ ಸಮಾಜದಲ್ಲಿ ಡಾಕ್ಟರ್, ಇಂಜನಿಯರ್, ಕೃಷಿ ವಿಜ್ಞಾನ, ಪಶು ವೈದ್ಯ ವಿಜ್ಞಾನ, ಬಿ.ಎ., ಎಂ.ಎ. ಪದವಿಗಳನ್ನು ಪಡೆದಿದ್ದಾರೆ. ಬಹುಶಃ ಈ ವಿದ್ಯಾರ್ಥಿವೇತನ ಸಿಗದಿದ್ದ ಪಕ್ಷದಲ್ಲಿ ಕೆಲವರಿಗೆ ಈ ಪದವಿಗಳನ್ನು ಪಡೆಯಲು ಹಣದ ಮುಗ್ಗಟ್ಟಿನಿಂದ ಸಾಧ್ಯವಾಗುತ್ತಿತ್ತಿಲ್ಲವೇನೋ ಎಂದು ತೋಚುತ್ತದೆ. ಆದುದರಿಂದ ಆಗಿನ ಕಾಲದ ಕೊಡಗಿನ ಹಾಗೂ ದಕ್ಷಿಣ ಕನ್ನಡ ಗೌಡ ವಿದ್ಯಾರ್ಥಿಗಳು ದಿ|| ನಿಡ್ಯಮಲೆ ಸೋಮಣ್ಣನವರನ್ನು ಸ್ಮರಿಸಬೇಕು.

ಈಗಿನ ಪರಿಸ್ಥಿತಿಯಲ್ಲಿ ಗೌಡರನ್ನು "Gowda" ಎಂಬುದಾಗಿ ಸೇರಿಸಬೇಕೆಂದು ಈಗ ಮೊನ್ನೆಯಾಗಿ ರಾಷ್ಟ್ರೀಯ ಹಿಂದುಳಿದ ಪಂಗಡಗಳ ಕಮಿಶನಿನ ಮುಂದೆ, ಕೊಡಗಿನ ವಿದ್ಯಾ ಸಂಘ ಹಾಗೂ ಕೊಡಗಿನ ಗೌಡ ಸಮಾಜ, ಮಂಗಳೂರಿನ ಗೌಡ ಸಮಾಜ ಮತ್ತು ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದವರು ಜೊತೆ ಸೇರಿ ಗೌಡರ ಪರವಾಗಿ ವಾದವನ್ನು ಮಂಡಿಸಿದ್ದಾರೆ. ಇದಲ್ಲದೆ ಕರ್ನಾಟಕ ಹಿಂದುಳಿದ ಪಂಗಡಗಳ ಕಮಿಶನಿನ ನವಂಬರ್‌ನಲ್ಲಿ ಮಂಗಳೂರಿನಲ್ಲೂ, ಡಿಸಂಬರ್‌ನಲ್ಲಿ ಮಡಿಕೇರಿಯಲ್ಲೂ, ಏಪ್ರಿಲ್ ತಿಂಗಳಲ್ಲಿ ಬೆಂಗಳೂರಿನಲ್ಲೂ "ಗೌಡ" ಎಂಬ ಹೆಸರನ್ನು ಸೇರಿಸುವ ಬಗ್ಗೆ ಸಂದರ್ಶನ ನಡೆಯುತ್ತದೆ. ಅದಕ್ಕೆ ಕೊಡಗಿನ ಸರ್ಕಾರ ಹಾಗೂ ಮದ್ರಾಸ್ ಸರ್ಕಾರ 1947 ರಿಂದ 1956ರವರೆಗೆ ಹಿಂದುಳಿದ ಪಂಗಡಕ್ಕೆ ಸೇರಿಸಿದ್ದ ಪಟ್ಟಿಯನ್ನು Coorg Gazette ಮತ್ತು Madras Gazetteನಲ್ಲಿ ಪ್ರಕಟವಾದುದರ ಯಥಾ ನಕಲನ್ನು ಮಡಿಕೇರಿಯಲ್ಲಿ ಕೋಟೆಯಲ್ಲಿರುವ ಸೆಂಟ್ರಲ್ ರಿಕಾರ್ಡ್‌ನಲ್ಲಿಯೂ ಹಾಗೂ ಮಂಗಳೂರಿನ ಸೆಂಟ್ರಲ್ ರೆಕಾರ್ಡಿನಲ್ಲಿಯೂ ಸಿಗುತ್ತದೆ. ಮಡಿಕೇರಿಯವರು ಹಾಗೂ ಮಂಗಳೂರಿನವರು ಇದನ್ನು ತೆಗೆಸಿ, ಅಧ್ಯಕ್ಷರು ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ, ನಂ. 1 ಸಿ ಮುಖ್ಯ ರಸ್ತೆ, ಬಿನ್ನಿ ಗಾರ್ಮೆಂಟ್ ಫ್ಯಾಕ್ಟರಿ ಹಿಂಭಾಗ, ಗಂಗಾನಗರ, ಬೆಂಗಳೂರು–32 ಇಲ್ಲಿಗೆ ಕಳುಹಿಸಿ ಕೊಟ್ಟಿದ್ದರೆ ನಾವು ಇಲ್ಲಿ ಕರ್ನಾಟಕ ಹಿಂದುಳಿದ ಆಯೋಗದ ಮುಂದೆ ಹೋದಾಗ ಅವರಿಗೆ ತೋರಿಸಲು ಆಗುತ್ತದೆ. ಅದಲ್ಲದೆ ಎಸ್.ಎಸ್.ಎಲ್.ಸಿ. ಸರ್ಟಿಫಿಕೇಟಿನಲ್ಲಿ ಧರ್ಮ/ಜಾತಿಯ ಹೆಸರು ಇಂಗ್ಲಿಷಿನಲ್ಲಿ Hindu/Gowda ಎಂಬುದಾಗಿ ಬರೆದಿರುವ ಪುಟದ ಜೆರಾಕ್ಸ್ ನಕಲನ್ನು ಸಹ ಮೇಲೆ ತಿಳಿಸಿದ ವಿಳಾಸಕ್ಕೆ ಕಳುಹಿಸಿ ಕೊಡಬೇಕಾಗಿ ಈ ಮೂಲಕ ಕೇಳಿಕೊಳ್ಳುತ್ತೇನೆ. ಸಾಧ್ಯವಾದರೆ 1998ನೇ ಇಸವಿ ಡಿಸೆಂಬರ್ ಅಂತ್ಯದೊಳಗೆ ಕಳುಹಿಸಿ ಕೊಡುವಂತೆ ವಿನಂತಿ. ○

—ಪ್ರೊ|| ಪೂಜಾರಿ ಮೊಣ್ಣಪ್ಪ, ಬೆಂಗಳೂರು.

---

[3ನೇ ಪುಟದಿಂದ]

ತನ್ನ ಗಳಿಕೆಯಿಂದ ಅಲ್ಪವನ್ನಾದರೂ ಖಡ್ಡಾಯವಾಗಿ ಸಮಾಜಕ್ಕೆ ಅರ್ಪಿಸಬೇಕು. ಇದೇ ಸಂಸ್ಕೃತಿ ಜೀವನದ ಪ್ರಥಮ ಗುರಿ.

ಅಮ್ಮಣ್ಣನವರು ತಮ್ಮ ಜೀವನದಲ್ಲಿ ಬಹಳ ಏರು ಪೇರುಗಳನ್ನು ಕಂಡವರು. ಸಾರ್ಥಕ ಜೀವನ ನಡೆಸಿರುವವರು. ಸಮಾಜವನ್ನು ಅರಿತವರು ಇವರ ಮಾರ್ಗದರ್ಶನ ಯುವ ಪೀಳಿಗೆ ಅರಿತು ತಮ್ಮ ತಮ್ಮ ಸಾಧನೆ ಮಾಡಲಿ. ಸಮಾಜ ನಿರ್ಮಾಣ ಮಾಡಲಿ. ಅಮ್ಮಣ್ಣನವರ ಕುಟುಂಬಕ್ಕೆ ಈ ನಿಧನ ಭರಿಸಲಾರದ ನಷ್ಟ. ಈ ನಷ್ಟ ಕಷ್ಟಗಳನ್ನು ಎದುರಿಸುವ ಶಕ್ತಿಯನ್ನು ಆ ಭಗವಂತ ಗೌರಮ್ಮಳಿಗೆ ಕರುಣಿಸಲಿ. ಅವರ ಆತ್ಮ ಧೈರ್ಯವನ್ನು ಹೆಚ್ಚಿಸಲೆಂದು ನನ್ನ ಪ್ರಾರ್ಥನೆ. ಹಿರಿಯರ ಆಶೀರ್ವಾದವೇ ಕಿರಿಯರಿಗೆ ಪ್ರಾಣವಾಯು. ○

—ಚೇಂದ್ರಿಮಾಡ ಗ. ಮುತ್ತಪ್ಪ,
ಕುಶಾಲನಗರ.

# ಸಿದ್ಧವೇಶ : ಪ್ರತಿಭಟನೆ ಮತ್ತು ನಿರಸನ

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ, ಪುತ್ತೂರು ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ವಾಸಮಾಡುತ್ತಿರುವ ಗೌಡ ಜನಾಂಗದವರು ಸುಗ್ಗಿ ಹುಣ್ಣಿಮೆಯ ಸಂದರ್ಭದಲ್ಲಿ 'ಸಿದ್ಧ ವೇಶ' ಕುಣಿಯುತ್ತಾರೆ. ನಿಗದಿಪಡಿಸಿದ ದಿನ ಹಳ್ಳಿಯ ಹಿರಿಯ ಗೌಡನೊಬ್ಬನ ನೇತೃತ್ವದಲ್ಲಿ ಆಸಕ್ತ ಗೌಡ ಯುವಕರು ಊರಿನ ಭೂತದ ಚಾವಡಿಯಲ್ಲೋ, ಪ್ರತಿಷ್ಠಿತ ಗೌಡನೊಬ್ಬನ ಮನೆಯಂಗಳದಲ್ಲೋ ಒಟ್ಟು ಸೇರುತ್ತಾರೆ. ಸಿದ್ಧವೇಶ ಕುಣಿಯುವ ದಿನಗಳನ್ನು ನಿರ್ಧರಿಸುತ್ತಾರೆ. ಉತ್ಸಾಹಿಗಳಾದ ಆರು ಅಥವಾ ಏಳು ಗೌಡ ಯುವಕರು ಕುಣಿತಕ್ಕೆ ನಿಲ್ಲುತ್ತಾರೆ. ಅತ್ಯಂತ ಹಾಸ್ಯ ಪ್ರಜ್ಞೆ ಇರುವ ಒಬ್ಬಾತನು 'ಬಾಹ್ಮಣ'ನ ವೇಷ ಹಾಕಲು ಸಿದ್ಧನಾಗುತ್ತಾನೆ. ವೃದ್ಧರಾದವರಲ್ಲೊಬ್ಬ ದಾಸಯ್ಯ'ನ ವೇಷವನ್ನೂ, ಅತ್ಯಂತ ಉತ್ಸಾಹಿಯೂ ಕ್ರಿಯಾಶೀಲನೂ ಆಗಿರುವಾತನು 'ಸನ್ಯಾಸಿ'ಯ ವೇಶ ಹಾಕಲೂ ತಯಾರಾಗುತ್ತಾನೆ. ಇದಿಷ್ಟೂ ಪಾತ್ರಗಳು ಸಿದ್ಧವೇಶಕ್ಕೆ ಅಗತ್ಯವಾದುವುಗಳು.

ಸಿದ್ಧವೇಶ ಕುಣಿವ ಯುವಕರು, ಕುಣಿತದ ದಿನ ಬಂದಾಗ ತಲೆಗೆ ಕೆಂಪು ಬಣ್ಣದ ಮುಂಡಾಸನ್ನು ಕಟ್ಟಿ, ಅದರ ಒಂದು ತುದಿಯನ್ನು ಬಲಗಿವಿಯ ಮೇಲಿನಿಂದ ಭುಜಕ್ಕೆ ಇಳಿಬಿಡುವರು. ತುಂಬಾ ಡೊಗಳೆ ಆಗಿರುವ ಅಂಗಿಯೊಂದನ್ನು ಧರಿಸಿ, ಸೊಂಟಕ್ಕೆ ಕಚ್ಚೆಹಾಕುತ್ತಾರೆ. ಅಂಗಿಯ ಮೇಲಿನಿಂದ ಸೊಂಟಕ್ಕೆ ಗಟ್ಟಿಯಾಗಿ 'ದಟ್ಟಿ'ಯೊಂದನ್ನು ಕಟ್ಟುತ್ತಾರೆ. ಈ 'ದಟ್ಟಿ ದೇಹಕ್ಕೆ ಬಿಗುವನ್ನು ಒದಗಿಸಿದರೆ, ಬಲಗಡೆಗೆ ಇಳಿಬಿಟ್ಟ ಮುಂಡಾಸು ಕುಣಿತಕ್ಕೆ ಸೊಗಸಾದ ಲಯವನ್ನು ಸಿದ್ಧಿಸಿ ಕೊಡುತ್ತದೆ. ದಾಸಯ್ಯನು ಕೆಂಪು ಶಾಲು ಹೊದ್ದು, ಕೈಯಲ್ಲಿ ಶಂಖ ಮತ್ತು ಜಾಗಟೆಯನ್ನು ಹಿಡಿಯುತ್ತಾನೆ. ಬಿಳಿ ಪಂಚೆ ತಂದು ಕಚ್ಚೆ ಹಾಕಿಕೊಳ್ಳುತ್ತಾನೆ. ಬ್ರಾಹ್ಮಣ ವೇಷಧಾರಿ ಕೂಡಾ ಬಿಳಿ ಪಂಚೆಯಲ್ಲಿ ಕಚ್ಚೆಹಾಕಿ, ತಲೆಗೆ ಜುಟ್ಟು ಕಟ್ಟಿ, ಗೋಣಿ ನಾರಿನ ಹಗ್ಗದಿಂದ ದೊಡ್ಡದಾದ ಜನಿವಾರಮಾಡಿ ಧರಿಸಿಕೊಳ್ಳುತ್ತಾನೆ. ಆ ಜನಿವಾರಕ್ಕೆ ಬಲವಾದ ಗಂಟೊಂದನ್ನು ಹಾಕಿರುತ್ತಾನೆ. ಮೈಗೆ ಗಂಧ, ಹಣೆಗೆ ನಾಮ, ಹಾಕಿ ಬ್ರಾಹ್ಮಣ ವೇಷಧಾರಿಯು ತಯಾರಾಗುತ್ತಾನೆ. ಇದರಲ್ಲಿ ಅತಿ ಮುಖ್ಯವಾದ ವೇಷ ಸನ್ಯಾಸಿಯದ್ದು. ಒಣಗಿದ ಎಳೆ ಎಲೆಗಳನ್ನು ತಂದು ಇಡೀ ದೇಹಕ್ಕೆ ಕಟ್ಟಿ, ದೇಹ ಮರೆಯಾಗುವಂತೆ ಮಾಡುತ್ತಾರೆ. ಕಂಗಿನ ಹಾಳೆಯನ್ನು ಶಂಕುವಿನಾಕಾರದಲ್ಲಿ ಮಡಿಸಿ, ತಲೆಗೆ ಬೋರಲಾಗಿ ಇಟ್ಟುಕೊಂಡು, ತಲೆಯನ್ನು ಮರೆಸುತ್ತಾರೆ. ಹಸಿ ಬಾಳೆ ಎಲೆಯನ್ನು ತಂದು ಗರಗಸದಂತೆ ಕತ್ತರಿಸಿ ಮುಖಕ್ಕೆ ಅಡ್ಡವಾಗಿ ಕಟ್ಟಿ, ಇಡೀ ಮುಖವನ್ನು ಮರೆಮಾಚುತ್ತಾರೆ. ತೆಳ್ಳಗಿನ ನಾಲ್ಕಾರು ಬೆತ್ತಗಳನ್ನು ಜೋಡಿಸಿ ಹಗ್ಗದಿಂದ ಸುತ್ತಿ ಸೊಂಟದ ಮುಂಭಾಗದಲ್ಲಿ ಕಟ್ಟಿ ನಿಗುರಿ ನಿಂತ ಶಿಶ್ನವನ್ನು ಸೃಷ್ಟಿಸುತ್ತಾರೆ. ಊರೊಳಗೆ ಓಡಾಡುವಾಗ ಪೋಕರಿಗಳು ಶಿಶ್ನಕ್ಕೆ ಕೈ ಹಾಕುವರೆಂಬ ಕಾರಣಕ್ಕೆ ಶಿಶ್ನದ ತುದಿಗೆ ಮುಳ್ಳನ್ನು ಕಟ್ಟುತ್ತಾರೆ. ಅನಂತರ ಸನ್ಯಾಸಿಯ ಕೈಗೆ ಒಂದು ದೊಣ್ಣೆ ಕೊಡುತ್ತಾರೆ. ಕೆಲವು ಬಾರಿ ಭಸ್ಮದ ಪಾತ್ರೆಯನ್ನು ಸನ್ಯಾಸಿ ಹಿಡಿಯುತ್ತಾನೆ. ಇವಿಷ್ಟು ವೇಷ ಭೂಷಣಗಳು, ಅತ್ಯಂತ ಸರಳವಾದುವು.

ಎಲ್ಲ ಸಿದ್ಧವಾದ ಮೇಲೆ ಈ ಸನ್ಯಾಸಿಯನ್ನು ಸಾಲಿನ ಮಧ್ಯದಲ್ಲಿ ನಿಲ್ಲಿಸಿಕೊಂಡು, ರಾತ್ರಿಯಾಗುತ್ತಲೇ, ಊರು ಸುತ್ತಲು ಹೊರಡುತ್ತಾರೆ. ಎಲ್ಲರೂ 'ಡಿಂಬಿಸಾಲೆ' ಎಂಬ ಸೊಲ್ಲನ್ನು ಹೇಳುತ್ತಾ ನಡೆಯುತ್ತಾರೆ. ತಾವು ಕುಣಿತ ಆರಂಭ ಮಾಡಲಿರುವ ಮನೆ ಹತ್ತಿರ ಬಂದಾಗ, ಸನ್ಯಾಸಿಯನ್ನು ಮನೆಯ ಪಕ್ಕದಲ್ಲಿ ಅಡಗಲು ಹೇಳುತ್ತಾರೆ. ಉಳಿದವರೆಲ್ಲ ಅಂಗಳಕ್ಕೆ ಹೋಗಿ, ಶಬ್ಧ ಮಾಡಿ, ಮನೆಯವರನ್ನು ಎಬ್ಬಿಸುತ್ತಾರೆ. ಬೆಳಕಿಗಾಗಿ ದೀಪವೊಂದನ್ನು ಅಂಗಳದ ಮಧ್ಯದಲ್ಲಿ ಇಟ್ಟು ಕುಣಿಯುವ ಮಂದಿ, ವೃತ್ತಾಕಾರದಲ್ಲಿ ಅದರ ಸುತ್ತ ನಿಲ್ಲುವರು. ಒಬ್ಬಾತ ಸೊಲ್ಲನ್ನು ಆರಂಭಿಸುತ್ತಾನೆ.

ಸಿದ್ಧುಲಿಂಗ ಮುದ್ಧುಲಿಂಗ । ಸಿದ್ಧವೇಸೋ॥
ನಾವು ಯಾವೂರು ಯಾವ ತಳ । ಸಿದ್ಧವೇಸೋ ॥
ನಾವು ಕಾಶೀಯ ತಳದವು । ಸಿದ್ದವೇಸೋ ॥
ನಾವು ಐಗೂರು ತಳದವು । ಸಿದ್ದವೇಸೋ ॥

ಎಂದು ಹಾಡುವಾಗ, ಕುಣಿಯುವ ಗುಂಪು ಸಿದ್ಧವೇಸೊ ಎಂಬ ಸೊಲ್ಲನ್ನು ಪುನರಾವರ್ತಿಸುತ್ತ 4 ಹೆಜ್ಜೆಗಳಲ್ಲಿ ವೃತ್ತಾಕಾರವಾಗಿ ಸುತ್ತುತ್ತಿರುತ್ತಾರೆ. ಪ್ರತಿ ನಾಲ್ಕನೇ ಹೆಜ್ಜೆಗೆ ಕುಣಿತದವರು ವೃತ್ತದ ಮಧ್ಯಕ್ಕೆ ಚಾಚಿಕೊಂಡು ಕೇಂದ್ರೀಕೃತವಾಗುತ್ತಾರೆ. ಅದೇ ಸಂದರ್ಭದಲ್ಲಿ ಎರಡೂ ಕೈಗಳನ್ನು ಬಲವಾಗಿ ತಾಡಿಸಿ ಚಪ್ಪಾಳೆಯ ಸ್ವರ ಹೊರಡಿಸುತ್ತಾರೆ. ಹೀಗೆ ಹಾಡು ಕುಣಿತ ಮುಂದುವರಿಯುತ್ತಿದ್ದಾಗ, 27ನೇ ಸೊಲ್ಲಿನಲ್ಲಿ ನಾವು 'ಶೃಂಗೇರಿ ಮಠದಿಂದ' ಎಂಬ ಸಾಲು ಬರುತ್ತದೆ. ಇದಕ್ಕೆ ಗುಂಪು 'ಸಿದ್ಧವೇಸೋ' ಎಂಬ ಸೊಲ್ಲನ್ನು ಸೇರಿಸುತ್ತಿದ್ದಂತೆ ಅದುವರೆಗೆ ಅಡಗಿ ಕುಳಿತಿದ್ದ ಸನ್ಯಾಸಿ ಥಟ್ಟನೆ ಅಂಗಳದಲ್ಲಿ ಪ್ರತ್ಯಕ್ಷನಾಗುತ್ತಾನೆ. ದೊಣ್ಣೆಯನ್ನು ನೆಲಕ್ಕೆ ಊರುತ್ತಾ ಕುಂಟನಂತೆ ಹೆಜ್ಜೆಹಾಕಿ, ಲಂಘಿಸಿಕೊಂಡು ಬರುವ ಸನ್ಯಾಸಿಯು

ಕುಣಿತದವರ ವೃತ್ತವನ್ನು ಭೇದಿಸಿ, ಒಳಕ್ಕೆ ಸರಿಯುತ್ತಾನೆ. ಅದೇ ಸಂದರ್ಭದಲ್ಲಿ ಬ್ರಾಹ್ಮಣನು ಅಂಗಳದ ಬಲಬದಿಗೂ, ದಾಸಯ್ಯನು ಅಂಗಳದ ಎಡಬದಿಯೂ ಬಂದು ಕುಳಿತುಕೊಳ್ಳುತ್ತಾರೆ.

ಇಡೀ ಅಂಗಳ ಇಲ್ಲಿನ ಕಲಾವಿದರಿಂದ ತುಂಬುತ್ತವೆ. ಹಾಗೆ ತುಂಬಿದಾಗಲೂ ತುಂಬ ಶಿಸ್ತುಬದ್ಧವಾಗಿಯೇ ಕುಣಿತ ಮುಂದುವರಿಯುತ್ತದೆ.

ಸನ್ಯಾಸಿ ವೃತ್ತದೊಳಗೆ ಪ್ರವೇಶಿಸುತ್ತಿದ್ದಂತೆ ಕುಣಿತದವರು ತಮ್ಮ ಗಾತ್ರವನ್ನು ಕುಗ್ಗಿಸಿ, ದೇಹವನ್ನು ಬಗ್ಗಿಸಿ, ಕುಣಿತದ ವೇಗವನ್ನು ಹೆಚ್ಚಿಸುತ್ತಾರೆ. ಅದೇ ಪ್ರಮಾಣದಲ್ಲಿ ತನ್ನ ವೇಗವನ್ನು ಹೆಚ್ಚಿಸಿಕೊಂಡ ಸನ್ಯಾಸಿಯು ವೃತ್ತದೊಳಗೇ ಅಹಹಾ...ಕುಹೂ...ಎಂದು ಅಸಂಬದ್ಧ ಪ್ರಲಾಪ ಮಾಡುತ್ತಾ ಅಡ್ಡಾದಿಡ್ಡಿಯಾಗಿ ಸುತ್ತುತ್ತಿರುತ್ತಾನೆ. ಕುಣಿತದವರ ಹಾಡಿನ 43ನೇ ಸೊಲ್ಲಿನಲ್ಲಿ ಬರುವ "ನಮ್ಮ ಕೈಯನ್ನಾದ್ರೂ ತುಂಬಿ ಕಳುಹಿ" ಎಂಬಲ್ಲಿಗೆ ಹಾಡು ಮುಕ್ತಾಯವಾಗುತ್ತದೆ. ಕುಣಿತವೂ ನಿಲ್ಲುತ್ತದೆ. ಕುಣಿಯುವ ಮಂದಿ ಗುಂಪಾಗಿ ನಿಂತು ಕೊನೆಗೆ ಅಂಗಳದ ಬದಿಗೆ ಸರಿದು ಮುಖ್ಯ ಸ್ಥಳವನ್ನು ಸನ್ಯಾಸಿಗೆ ಬಿಟ್ಟುಕೊಡುತ್ತಾರೆ.

ಇಷ್ಟರಲ್ಲಿ ದಾಸಯ್ಯನು ಶಂಖವನ್ನು ಊದುತ್ತ, ಜಾಗಟೆ ಬಡಿಯುತ್ತ ಸದ್ದು ಮಾಡುತ್ತಿರುತ್ತಾನೆ. ಬ್ರಾಹ್ಮಣನು ಜನಿವಾರದ ಗಂಟನ್ನು ಹಿಡಿದುಕೊಂಡು, ಅದನ್ನು ನೀವುತ್ತಾ, ಪೂಜೆ ಮಾಡುವವನಂತೆ ನಟಿಸುತ್ತಾನೆ. ಬಾಯಲ್ಲಿ ಮಂತ್ರ ಹೇಳುವವನ ರೀತಿಯಲ್ಲಿ ವಟಗುಟ್ಟುತ್ತಿರುತ್ತಾನೆ. ಇವರಿಬ್ಬರ ಮಧ್ಯೆ ನಿಲ್ಲುವ ಸನ್ಯಾಸಿಯು ಬ್ರಾಹ್ಮಣ ಮತ್ತು ದಾಸಯ್ಯನ ಕಡೆ ತಿರುಗಿ ಅವರಿಬ್ಬರನ್ನು ಲೇವಡಿ ಮಾಡಲು ಆರಂಭಿಸುತ್ತಾನೆ. ಬ್ರಾಹ್ಮಣನ ಮಂತ್ರವನ್ನು ತಾನೂ ಅನುಕರಿಸುವ, ದಾಸಯ್ಯನ ಶಂಖದ ಧ್ವನಿಯನ್ನು ತನ್ನ ಕಂಠದಿಂದ ಹೊರಡಿಸುವ ಸನ್ಯಾಸಿ ಅವರನ್ನು ಅಣಕಿಸುವುದು ಸ್ಪಷ್ಟವಾಗಿದೆ. ಕೊನೆಗೆ ಬ್ರಾಹ್ಮಣ ಮತ್ತು ದಾಸಯ್ಯರನ್ನು ಅಂಗಳದ ಸುತ್ತ ಓಡಿಸುತ್ತಾನೆ. ನಿಗುರಿ ನಿಂತಂತಿದ್ದ ತನ್ನ ಶಿಶ್ನವನ್ನು ಅವರಿಬ್ಬರಿಗೂ ಮುಟ್ಟಿಸಲು ಯತ್ನಿಸುತ್ತಾ, ಅವರನ್ನು ಅವಮಾನಿಸುತ್ತಾನೆ. ಸ್ವಲ್ಪ ಹೊತ್ತು ಹೀಗೆ ನಡೆದ ಅನಂತರ ಬ್ರಾಹ್ಮಣ ಮತ್ತು ದಾಸಯ್ಯ ಅಂಗಳದ ಬದಿಗೆ ಸರಿದು ರಂಗದಿಂದ ಮರೆಯಾಗುತ್ತಾರೆ.

ಈಗ ಅಂಗಳದಲ್ಲಿ ಸನ್ಯಾಸಿ ಒಬ್ಬನೇ ಇರುತ್ತಾನೆ. ಆತ ತನ್ನ ಹಿಂದಿನ ಚೇಷ್ಟೆಗಳನ್ನೆಲ್ಲ ಪುನರಾವರ್ತಿಸುತ್ತಾನೆ. ಅಹಹಾ ಊಹೂಹೂ...ಎಂದು ಕೂಗುವುದು, ಕುಂಟುವುದು, ಬಾಯಿ ತೆರೆದು ಆರ್ಭಟಿಸುವುದು, ಅತ್ತಂತೆ ಮಾಡುವುದು, ಭಿಕ್ಷೆ ಬೇಡುವುದು ಇತ್ಯಾದಿ ಅಭಿನಯಗಳನ್ನು ಮಾಡುತ್ತಾನೆ. ಶಿಶ್ನವನ್ನು ಕೈಯಲ್ಲಿ ಹಿಡಿದುಕೊಂಡು 'ಎದ್ದು ನಿಂತಿದೆ...ಸಾಟಿ ಇಲ್ಲ ಒಂದೇ ಕುತ್ತಿಗೆ ಒಂಬತ್ತು ಮಕ್ಕಳಾಗಬೇಕು' ಎಂದು ಹೇಳುತ್ತಾನೆ. ಮತ್ತೆ ಸ್ವಲ್ಪ ಕುಣಿದು 'ಹೊಳೆ ಬದಿಗೆ ಹೋಗಬೇಕು ಲಕ್ಕಿ [ಶಿಶ್ನ] ಪೂಜೆ ಮಾಡಬೇಕು' ಎನ್ನುವನು. ಪ್ರೇಕ್ಷಕರಾಗಿರುವ ಮನೆ ಹೆಂಗಸರೆಲ್ಲ ನಾಚುವಂತೆ ಶಿಶ್ನವನ್ನು ಆಡಿಸುತ್ತಾನೆ. ಇಷ್ಟರಲ್ಲೆ ಅಂಗಳದಿಂದ ಮರೆಯಾಗಿದ್ದ ಬ್ರಾಹ್ಮಣ ದಾಸಯ್ಯ ಮತ್ತು ಕುಣಿತದವರು ಅಂಗಳಕ್ಕೆ ಬರುತ್ತಾರೆ. ಇವರ ಕೆಲಸಗಳಿಂದ ಸಂಪ್ರೀತರಾದ ಮನೆ ಮಂದಿ ಏನನ್ನಾದರೂ [ಹೆಚ್ಚಾಗಿ ಭತ್ತ] ಕೊಟ್ಟರೆ ಅದನ್ನು ಬಗಲಿಗೇರಿಸಿಕೊಂಡು ಮುಂದಿನ ಮನೆಗೆ ನಡೆಯುತ್ತಾರೆ. ಹೀಗೆ ದಾರಿ ನಡೆಯುವಾಗ ಸಿದ್ಧವೇಶದ ಇನ್ನೊಂದು ತಂಡ ಎದುರಾಗಬಾರದು. ಎದುರಾದರೆ ಸಿದ್ಧರ ಬಗೆಗೆ, ಮಠಗಳ ಬಗೆಗೆ ಪ್ರಶ್ನೋತ್ತರಗಳಾಗುತ್ತವೆ. ಸರಿಯಾದ ಉತ್ತರಗಳು ಬಾರದಿದ್ದರೆ ಹೊಡೆದಾಟವಾಗುತ್ತದೆ. ಹಾಗಾಗಿ ಎರಡೂ ತಂಡಗಳು ಮುಖಾಮುಖಿಯಾಗುವುದನ್ನು ತಪ್ಪಿಸಿಕೊಳ್ಳುತ್ತವೆ. ಸುಗ್ಗಿ ಹುಣ್ಣಿಮೆಯ ದಿನದಂದು ಈ ಕುಣಿತ ನಿಲ್ಲುತ್ತದೆ. ಆ ದಿನ ತಂಡದವರೆಲ್ಲ ಒಟ್ಟು ಸೇರಿ ಮೊದಲು ಒಟ್ಟು ಸೇರಿದ ಜಾಗದಲ್ಲಿ 'ಪುರುಷರ ಪೂಜೆ' ಮಾಡುತ್ತಾರೆ. ಕೋಳಿ ಕೊಯ್ದು, ರೊಟ್ಟಿ, ಹೆಂಡ ಕೊಟ್ಟು, ತಾವೂ ಉಂಡೂ ಆ ದಿನವನ್ನು ಸಂಭ್ರಮದಿಂದ ಕಳೆಯುತ್ತಾರೆ.

ಇಲ್ಲಿನ ವಿವರಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಇಡೀ ಸಿದ್ಧವೇಶದಲ್ಲಿ 'ಸನ್ಯಾಸಿ'ಗೇ ಪ್ರಮುಖ ಸ್ಥಾನ ಸಂದಾಯವಾಗಿದೆ. ಈ ಸನ್ಯಾಸಿ ಸಿದ್ಧವೇಶ ಕುಣಿವ 'ಸಿದ್ಧರ' ಇಲ್ಲವೇ 'ಪುರುಷರ ಮಕ್ಕಳ' ವೃತ್ತವನ್ನು ಭೇದಿಸಿ ಒಳಹೋಗಬಲ್ಲ, ಆತನಿಗೆ ಸಿದ್ಧರೆಲ್ಲರೂ ತಲೆಬಾಗುತ್ತಾರೆ. ಬ್ರಾಹ್ಮಣ ಮತ್ತು ದಾಸಯ್ಯನನ್ನು ಅಂಗಳದಲ್ಲಿ ಓಡಾಡಿಸುವುದಲ್ಲದೆ ಅವರನ್ನು ಅವಮಾನಿಸುವ ಕೆಲಸವನ್ನು ಸನ್ಯಾಸಿ ಮಾಡುತ್ತಾನೆ. ಅಂಗಳದಲ್ಲಿ ಬೇಕಾದಂತೆ ಕುಣಿಯುವ, ಮಾತನಾಡುವ, ಓಡಾಡುವ, ಕಿರುಚುವ, ಕುಂಟುವ ಅವಕಾಶ ಇರುವುದು ಸನ್ಯಾಸಿಗೆ ಮಾತ್ರ. ಅಂಗಳದ ಮೇಲೆ ಅವನ ಹಿಡಿತ ಪೂರ್ಣ ಪ್ರಮಾಣದ್ದು. ಇದು ಅಭ್ಯಾಸಯೋಗ್ಯ ವಿಚಾರವಾಗಿದೆ.

ಸಿದ್ಧವೇಶದ ಸನ್ಯಾಸಿಯ ಬಾಹ್ಯ ವಿವರಗಳು, ಚಲನವಲನಗಳು, ಮಾತುಗಾರಿಕೆಯ ಶೈಲಿ ಮತ್ತು ಆ ಪಾತ್ರದ ಗುಣಧರ್ಮವನ್ನು ಪರೀಕ್ಷಿಸಿದರೆ, ಅದು ಮಧ್ಯಕಾಲೀನ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯವಾಗಿರುವ ಲಕುಲೀಸ ಪಾಶುಪತ ಸನ್ಯಾಸಿಗಳನ್ನೇ ಪೂರ್ತಿಯಾಗಿ ಹೋಲುತ್ತದೆ. 'ಲಕುಲ'ಕ್ಕೆ

'ದೊಣ್ಣೆ' ಎಂಬ ಅರ್ಥವಿದೆ [ಕಿಟ್ಟೆಲ್ 1973 : 1431] ಸಿದ್ಧವೇಶದ ಸನ್ಯಾಸಿಯ ಕೈಯಲ್ಲಿ ದೊಣ್ಣೆ ಇಲ್ಲದೆ ಹೊರಗೆ ಹೊರಡಲಾರ. ಮೇಲಾಗಿ ಲಾಕುಳ ಶೈವರು ನಗ್ನರಾಗಿದ್ದು ಕೊಂಡು ಕಾಮುಕರಂತೆ ವರ್ತಿಸುತ್ತಿದ್ದರೆಂಬುದನ್ನು ಹ್ಯೂಯೆನ್‌ತ್ಸಾಂಗನು ತನ್ನ ಬರಹದಲ್ಲಿ ದಾಖಲು ಮಾಡಿದ್ದಾನೆ [Watters 1904 : 296–331]. ಲಾಕುಳ ಶೈವರ ಬಗೆಗೆ ಉಪಯುಕ್ತ ಅಧ್ಯಯನ ನಡೆಸಿರುವ ಕಾವೆಲ್ಲರ ಅಭಿಪ್ರಾಯವೂ ಇದೇ ಆಗಿದೆ. [Cowel and Gough 1882] ಲಾಕುಳ ಪರಂಪರೆಗೆ ಇನ್ನೊಂದು ಹೆಸರಾದ ಕಾಳಾಮುಖರಲ್ಲಿ ಅತಿಮಾರ್ಗಿಗಳಿದ್ದರು. ಅವರು ಸುಂದರ ಸ್ತ್ರೀಯರ ಮುಂದೆ ಕಾಮಚೇಷ್ಟೆಗಳನ್ನು ಮಾಡುವುದಲ್ಲದೆ, ಬ್ರಾಹ್ಮಣರನ್ನು ಅವಮಾನಿಸುತ್ತಿದ್ದರು, ಎಂದು ಬ್ರಿಗ್ಸ್ ಹೇಳಿರುವುದೂ ಮೇಲಿನದಕ್ಕೆ ಪೂರಕವಾಗಿದೆ. [Briggs 1938]. ಕಾಳಾಮುಖ ಪರಂಪರೆಯ ಗುರುಗಳನ್ನು 'ಗೊರವ'ರೆಂದೂ ಕರೆಯುತ್ತಾರೆ. [ಚಿದಾನಂದಮೂರ್ತಿ 1979 : 136]. ಸಿದ್ಧವೇಶ ಕುಣಿಯುವ ಗೌಡ ಜನಾಂಗದವರು ಗೊರವನ ಪೂಜೆಯನ್ನು ಮಾಡುತ್ತಾರೆ. ಇದು ಶೈವ ಪರಂಪರೆಗೂ ಸಿದ್ಧವೇಶಕ್ಕೂ, ಗೌಡರಿಗೂ ಇರುವ ಸಂಬಂಧವನ್ನು ಗುರುತಿಸಲು ಸಹಾಯ ಮಾಡುವ ಪ್ರಮುಖ ಅಂಶ. ವಾಸ್ತವವಾಗಿ ಒಕ್ಕಲಿಗರು ಲಾಕುಳ ಶೈವರ ಗಾಢವಾದ ಪ್ರಭಾವಕ್ಕೆ ಒಳಗಾಗಿದ್ದಾರೆ. ಕದರಿ ಬೆಟ್ಟದಲ್ಲಿರುವ ಲಕುಲೀಶನು ಕೈಯಲ್ಲಿ ದೊಣ್ಣೆ ಹಿಡಿದಿದ್ದು, ಸಿದ್ಧರ ಆರಾಧ್ಯ ದೈವವಾಗಿದ್ದಾನೆ. ಗೌಡರು ಕದಿರಿ ೞ ವಿಶೇಷ ಗೌರವ ಸಲ್ಲಿಸುತ್ತಾರೆ. ಬಯಲು ಸೀಮೆಯ ಒಕ್ಕಲಿಗರು ಆದಿಚುಂಚನಗಿರಿಗೆ ಗೌರವ ಸಲ್ಲಿಸುವುದೂ ಇದಕ್ಕೆ ಪೂರಕವಾದ ಅಂಶ.

ಹೀಗೆ ಸಿದ್ಧವೇಶದ ಸನ್ಯಾಸಿಯನ್ನು ಸುಲಭವಾಗಿ ಲಾಕುಳಶೈವ ಪರಂಪರೆಯ ಸನ್ಯಾಸಿಯೆಂದು ಹೇಳಿಬಿಡಬಹುದು. ಆದರೆ ಸಿದ್ಧವೇಶದಲ್ಲಿನ 'ಸಿದ್ಧ' ಪದಕ್ಕೂ ಸಿದ್ಧವೇಶಕ್ಕಿರುವ ಇನ್ನೊಂದು ಹೆಸರಾದ 'ಪುರುಷರ ಮಕ್ಕಳ ಕುಣಿತ'ದ 'ಪುರುಷ' ಪದಕ್ಕೂ ಈ ಲಾಕುಳ ಸನ್ಯಾಸಿಗೂ ಇರುವ ಸಂಬಂಧವನ್ನು ಅಷ್ಟು ಸುಲಭವಾಗಿ ಹೇಳಲಾಗದು. 'ಸಿದ್ಧ' ಪದಕ್ಕೆ 'Prooved, substantiated' ಎಂಬ ಅರ್ಥವಿದೆ. [Moniar 1956 : 1215] ಇದು 'ಸಿದ್ಧಿ'–ಸಿದ್ಧಾಂತ ಎಂಬ ಪದಗಳೊಡನೆ ಸಂಬಂಧಹೊಂದಿದೆ. ಇದಕ್ಕೆ 'Established end' ಎಂಬುದು ಮೊನಿಯರ್‌ನ ವ್ಯಾಖ್ಯಾನ [Moniar 1956 : 1216] 'ಪರಿಪೂರ್ಣ', 'ಪಕ್ವವಾದ', 'ಸಾಧನೆಯ' ಗುರಿಮುಟ್ಟಿದೆ, ಎಂಬ ಅರ್ಥದಲ್ಲಿ 'ಸಿದ್ಧ' ಪದವು ಪ್ರಯೋಗವಾಗಿದೆ. ಈ ಹಿನ್ನೆಲೆಯಲ್ಲಿ ತಮಿಳುನಾಡಿನ ಸಿದ್ಧರ ಬಗೆಗೆ ಸುಬ್ರಹ್ಮಣ್ಯ ಅಯ್ಯರ್ ಹೇಳಿರುವ ಮಾತು ಗಮನಾರ್ಹ.

"Who live in Yoga see the devine power and light through such yoga are Siddhar" [Subramanya Ayyar 1950 : 7–8]. ಇಂಥ ಯೋಗಾಭ್ಯಾಸದಲ್ಲಿ ನಿರತರಾಗಿರುವ 'ಜೋಗಿಗಳು ಅಥವಾ ಸಿದ್ಧರನ್ನು ಕರ್ನಾಟಕದಲ್ಲಿ ನಾವಿಂದೂ ಕಾಣುತ್ತೇವೆ. ಅವರು ಅನೇಕ ಮಠಗಳನ್ನು ಕಟ್ಟಿಸಿದ್ದು, ಅವು 'ಸಿದ್ಧಮಠ' ಇಲ್ಲವೇ 'ಜೋಗಿಮಠ' ಎಂದು ಜನಪ್ರಿಯವಾಗಿವೆ. ಕದರಿಮಠ, ವಿಟ್ಲದ ಮಠ, ಮರ್ಕಂಜ ಮಠ, ಆದಿಚುಂಚನಗಿರಿ ಮಠ–ಇವಕ್ಕೆ ಕೆಲವು ಉದಾಹರಣೆಗಳು. ಸಿದ್ಧವೇಶದ ಹಾಡಿನಲ್ಲಿ ಬರುವ 14 ಮಠಗಳ ಹೆಸರಿನಲ್ಲಿ ಕನಿಷ್ಠ ಹತ್ತಾದರೂ ಸಿದ್ಧರ ಮಠಗಳೇ ಆಗಿವೆ.

ಈ ಸಿದ್ಧರ ಮಠದ ಶಿಷ್ಯರಾದ ಜೋಗಿಗಳು ಪಾಶುಪತ ಶೈವರೆಂಬುದು ಈಗಾಗಲೇ ಒಪ್ಪಿತವಾದ ವಿಚಾರ. ಕಾಲಭೈರವ ಇವರ ಕುಲದೇವರು. ಡಾ|| ಚಿದಾನಂದಮೂರ್ತಿ ಯವರ ಪ್ರಕಾರ ಕಾಲಭೈರವ ಆರಾಧನೆ ಮೂಲತಃ ಕಾಪಾಲಿಕರದ್ದು [ಚಿದಾನಂದ ಮೂರ್ತಿ 1970 : 259]. ಮಧ್ಯಕಾಲೀನ ಕರ್ನಾಟಕದ ರಾಜಕೀಯ ಧಾರ್ಮಿಕ ಬೆಳವಣಿಗೆಯ ಪರಿಣಾಮವಾಗಿ ಕಾಪಾಲಿಕರು ಮತ್ತು ಕಾಳಾಮುಖರು ಪರಸ್ಪರ ಪ್ರಭಾವಕ್ಕೆ ಒಳಗಾಗಿರಬೇಕು. ಕಾಪಾಲಿಕರ ಕಾಲಭೈರವನು ಪಾಶುಪತರ ಆರಾಧನೆಯನ್ನು ಪಡೆಯುತ್ತಾ ಬಂದದ್ದಕ್ಕೆ ಅನೇಕ ಶಾಸನಗಳು ಸಾಕ್ಷಿ ಹೇಳುತ್ತವೆ. ಕ್ರಿ.ಶ. 1122 ರ ಕರ್ನೂಲಿನ ಶಾಸನ ಮತ್ತು ಕ್ರಿ.ಶ. 1062ರ ಹುಂಚದ ಶಾಸನಗಳು ಇದಕ್ಕೆ ಒಳ್ಳೆಯ ಉದಾಹರಣೆಗಳು. [South Indian Inscriptions IX, 1-204 & Ephigraphia Carnatica VIII : Nr]. ಗೌಡರೂ ಕಾಲಭೈರವನನ್ನು ಕೆಂಚರಾಯನೆಂಬ ಹೆಸರಿನಲ್ಲಿ ಆರಾಧಿಸಿಕೊಂಡು ಬರುತ್ತಿದ್ದಾರೆ. 'ಕಾಶಿಗೆ ಹೋದರೆ ವಿಶ್ವನಾಥನನ್ನು ನೋಡದಿದ್ದರೂ ಕಾಲಭೈರವನನ್ನು ನೋಡಬೇಕು' ಎಂಬ ಹೇಳಿಕೆಯೊಂದು ಗೌಡರಲ್ಲಿ ಬಳಕೆಯಲ್ಲಿದೆ.

ಇದರೊಂದಿಗೆ ಸಿದ್ಧವೇಶದವರನ್ನು 'ಪುರುಷರ ಮಕ್ಕಳು' ಎಂದು ಕರೆಯುವುದನ್ನು ಲಕ್ಷಿಸಬೇಕು. ಜೋಗಿಗಳನ್ನು ಪುರುಷರೆಂದೇ ಕರೆಯುವ ಸಂಪ್ರದಾಯ ವಾಡಿಕೆಯಲ್ಲಿದೆ. ಜೊತೆಗೆ ಸುಳ್ಯದ ಪರಿಸರದಲ್ಲಿ ಗೌಡರಿಂದ ಆರಾಧನೆಗೆ ಒಳಪಡುವ ಪುರುಷ ಭೂತವು ಕೂಡಾ ಉಲ್ಲೇಖಾರ್ಹ. ಈ ಭೂತವು ತಾನು ಕಾಶಿಗೆ ಹೋಗಿ ಕಾಲಭೈರವನನ್ನು ಪೂಜಿಸಿ ಬರುತ್ತೇ

(13ನೇ ಪುಟ ನೋಡಿ)

# ಆರೋಗ್ಯ ಚಿಂತನ :

## ಸರ್ಪಸುತ್ತು (ಸರ್ಪಹುಣ್ಣು)

## Herpes Zoster

ವ್ಯಕ್ತಿಯೊಬ್ಬನಿಗೆ ಸರ್ಪಸುತ್ತು ಬಂದರೆ ಅದೊಂದು ಭಯಂಕರ ರೋಗವೆಂದು ಜನರು ಭಾವಿಸುತ್ತಾರೆ. ರೋಗಿಯನ್ನು ಮಾಂತ್ರಿಕರ ಬಳಿ ಕರೆದೊಯ್ದು ಮಂತ್ರಿಸಿದ ನೀರನ್ನು ಹಾಕುತ್ತಾರೆ, ನಾನಾ ರೀತಿಯ ಗಿಡ ಮೂಲಿಕೆಗಳಿಂದ ಔಷಧಿ ಕೊಡುತ್ತಾರೆ. ಆದರೆ ಇದಾವ ಕ್ರಮಗಳಿಂದಲೂ ಇದಕ್ಕೆ ಪ್ರಯೋಜನವಾಗಲಾರದು. ಈ ರೋಗ ಎಲ್ಲಾ ಸಂದರ್ಭಗಳಲ್ಲೂ ಅಂಥ ಭಯಂಕರವಾದುದ್ದೇನಲ್ಲ.

ಸರ್ಪಸುತ್ತು ವೈರಸ್‌ನಿಂದ ಬರುವ ರೋಗ. ಸೀತಾಳ ಸಿಡುಬು (Chickenpox) ಉಂಟು ಮಾಡುವ ವೈರಸ್‌ಗಳಿಂದಲೇ ಈ ರೋಗ ಬರುತ್ತದೆ. ಆದ್ದರಿಂದ ಚಿಕ್ಕ ವಯಸ್ಸಿನಲ್ಲಿ ಸೀತಾಳ ಸಿಡುಬು ಆದ ಜನಕ್ಕೆ ಇದು ಹೆಚ್ಚಾಗಿ ಬರುತ್ತದೆ. ಸೀತಾಳ ಸಿಡುಬು ಬಂದ ನಂತರ ಈ ರೋಗಾಣುಗಳು ದೇಹದೊಳಗೆ ಇದ್ದು, ಸೂಕ್ತ ಸಂದರ್ಭ ಕಾಯುತ್ತಿರುತ್ತವೆ.! ಇದಕ್ಕೆ ಹಲವಾರು ವರ್ಷಗಳೇ ಬೇಕಾಗಬಹುದು. ಹಾಗೂ ಕೆಲವೇ ವ್ಯಕ್ತಿಗಳಿಗೆ ಮಾತ್ರ ಸರ್ಪಸುತ್ತು ಬರಬಹುದು. ಸರ್ಪಸುತ್ತು ಇರುವ ರೋಗಿಯ ನಿಕಟ ಸಂಪರ್ಕದಿಂದ ಸೀತಾಳ ಸಿಡುಬು ಬರಬಹುದು. ವಯಸ್ಸಾದವರಲ್ಲಿ ಇದು ಆಗಾಗ ಕಂಡುಬಂದರೆ ಅದು ಪ್ರತಿರೋಧ ಶಕ್ತಿ ತೀವ್ರವಾಗಿ ಕಡಿಮೆಯಾಗಿರುವುದರಿಂದ ಬಂದಿರಬಹುದು. ಹಾಗೂ ಅದು ಕ್ಯಾನ್ಸರ್, ಎಡ್ಸ್‌ನಂಥ ರೋಗವೊಂದರ ಸೂಚನೆಯಾಗಿರಬಹುದು.

ರೋಗಲಕ್ಷಣಗಳಲ್ಲಿ ಮುಖ್ಯವಾಗಿ ದೇಹದ ಒಂದು ಭಾಗದಲ್ಲಿ ಅತಿಯಾದ ನೋವಿದ್ದು, 3–4 ದಿನಗಳಲ್ಲಿ ಗುಳ್ಳೆಗಳು ಕಾಣಿಸಿಕೊಳ್ಳುತ್ತವೆ. ಇವು ಗುಂಪಾಗಿದ್ದು ಹೊಳೆಯುತ್ತಿರುತ್ತವೆ ಹಾಗೂ ವಿಪರೀತ ನೋವಿರುತ್ತದೆ. ಬೆನ್ನು, ಮುಖ, ಎದೆ ಕುತ್ತಿಗೆಗಳಲ್ಲಿ ಇದು ಆಗುವುದು ಜಾಸ್ತಿ. ಕೈಕಾಲುಗಳಲ್ಲಿ ಬಹಳ ವಿರಳ. ಹೆಚ್ಚಾಗಿ ಒಂದು ಎರಡು ವಾರಗಳ ನಂತರ ಇದು ತನ್ನಷ್ಟಕ್ಕೆ ತಾನೇ ಕಡಿಮೆಯಾಗುತ್ತದೆ. ಮುಖದಲ್ಲಿ ಎದ್ದ ಗುಳ್ಳೆಗಳು ಕೆಲವರಲ್ಲಿ ಕಣ್ಣಿನ ಕಾರ್ನಿಯಾ[Cornea]ದಲ್ಲೂ ಎದ್ದು ದೃಷ್ಟಿ ತೊಂದರೆ, ಕುರುಡುತನ ಆಗಬಹುದು. ಕೆಲವೊಮ್ಮೆ ಮೆದುಳು ಜ್ವರ ಸಹ ಆಗಿ ವ್ಯಕ್ತಿ ಸಾವನ್ನಪ್ಪಬಹುದು. ಕೆಲವರಿಗೆ ನೋವು ಅನೇಕ ದಿನಗಳವರೆಗೆ, ಮತ್ತೆ ಮತ್ತೆ ಬರಬಹುದು.

ಸರ್ಪಸುತ್ತಿಗೆ ಪರಿಣಾಮಕಾರಿಯಾದ ಔಷಧಿಯಲ್ಲಿ ಅತ್ಯಂತ ಮೊದಲ ಹಂತದಲ್ಲಿ ವೈರಸನ್ನು ನಾಶಪಡಿಸಲು ಏಸೈಕ್ಲೋವೇರ್ (Acyclovir) ಎಂಬ ಔಷಧವನ್ನು ಈಗೀಗ ಉಪಯೋಗಿಸಲಾಗುತ್ತಿದೆ. ಹೆಚ್ಚಾಗಿ ಇದು 1–2 ವಾರಗಳಲ್ಲಿ ಆದರಷ್ಟಕ್ಕೆ ವಾಸಿಯಾಗುತ್ತದೆ. ಆದ್ದರಿಂದಲೇ ಹಳ್ಳಿಯಲ್ಲಿ ಮಾಂತ್ರಿಕರು, ನಾಟಿ ಔಷಧಿಕಾರರು ಹೆಚ್ಚಿನ ಸಂದರ್ಭಗಳಲ್ಲಿ ಯಶಸ್ಸನ್ನು ಪಡೆಯುತ್ತಾರೆ! ನೋವು ನಿವಾರಣೆ ಮಾತ್ರೆಗಳನ್ನು ತೆಗೆದುಕೊಳ್ಳಬಹುದು. ಬ್ಯಾಕ್ಟೀರಿಯಾಗಳ ಸೋಂಕಾಗದಂತೆ ಜೀವ ನಿರೋಧಕಗಳನ್ನು ಕೆಲವೊಮ್ಮೆ ವೈದ್ಯರು ನೀಡುತ್ತಾರೆ. ಕಣ್ಣಿನ ಸರ್ಪಸುತ್ತಿಗೆ ಇಡೋಕ್ಸಿಯುರಿಡಿನಾ [Idoxiuridine] ಎಂಬ ಔಷಧಿ ಪರಿಣಾಮಕಾರಿಯಾಗಿದೆ.

● ಡಾ|| ಎನ್. ಎಸ್. ಪ್ರವೀಣ್ (ಎಂ.ಡಿ.)
ಮಡೆ, ಮಡಿಕೇರಿ.

## ಗೌಡ ಮಹಿಳಾ ಒಕ್ಕೂಟ : ಶಾರದ ಪೂಜೆ

ದಿನಾಂಕ 29–9–98ರಂದು ಗೌಡ ಮಹಿಳಾ ಒಕ್ಕೂಟ ಮಡಿಕೇರಿ, ಇವರು ಕೊಡಗು ಗೌಡ ವಿದ್ಯಾ ಸಂಘದ ಆಶ್ರಯದ ಕಟ್ಟಡದಲ್ಲಿ ಪ್ರಥಮ ಬಾರಿಗೆ ಶಾರದೆಯ ಪೂಜೆಯನ್ನು ಇತ್ತೀಚೆಗೆ ನೂತನವಾಗಿ ತೆರೆದ ಶಿಶುವಿಹಾರದಲ್ಲಿ ನಡೆಸಿದರು.

ಒಕ್ಕೂಟದ ಅಧ್ಯಕ್ಷಿಣಿ ಚೇಯಂಡಿರ ರಾಧ ಯಾಧವ ಇವರ ಘನ ಅಧಿಕಾರದಲ್ಲಿ ನಡೆದ ಸಮಾರಂಭದಲ್ಲಿ ರಾಧರವರು ಶಾರದೆಯ ವರ್ಣನೆಯನ್ನು ವರ್ಣರಂಜಿತವಾಗಿ ವಿವರಿಸಿದರಲ್ಲದೆ, ಪೂಜಾ ಸಮಯದಲ್ಲಿ ನಿರ್ಪಾಡಿ ನಾಗವೇಣಿ ಮತ್ತು ಪಂಜಿಪಳ್ಳ ಇಂದ್ರಾಕ್ಷಿಯವರು ಪೂಜಾ ಮಂತ್ರ ಪಠಿಸಿದರೆ, ಸೂದನ ಕಮಲಮ್ಮನವರು ದಿನದ ಮಹತ್ವವನ್ನು ವಿವರಿಸಿದರು. ಪ್ರಥಮವಾಗಿ ನಡೆದ ಈ ಸಮಾರಂಭದಲ್ಲಿ ಹೆಚ್ಚಾಗಿ ಮಕ್ಕಳು ಮತ್ತು ವನಿತೆಯರು ಪಾಲ್ಗೊಂಡಿದ್ದರು.

ಇದೇ ಸಂದರ್ಭದಲ್ಲಿ ಗೌಡ ವಿದ್ಯಾ ಸಂಘದ ಅಧ್ಯಕ್ಷರಾದ ಕೆ.ಕೆ. ಪೂರ್ಣಯ್ಯ, ಗೌಡ ಅಕಾಡೆಮಿ ಕಾರ್ಯದರ್ಶಿ ಕೋಡಿ ಚಂದ್ರಶೇಖರ್, ಗೌಡ ಆಕಾಡೆಮಿ ಖಜಾಂಚಿ ಪಳ್ಳಿಪುರ ಭರತ್ ಇವರುಗಳು ಪೂಜೆಗೆ ಆಗಮಿಸಿ, ಪ್ರಸಾದ ಸ್ವೀಕರಿಸಿ ತಮ್ಮ ಸಂತಸವನ್ನು ವ್ಯಕ್ತಪಡಿಸಿದರು.

● ವರದಿ : ಬೈತಡ್ಕ ಜಾನಕಿ ಬೆಳ್ಯಪ್ಪ
ಮಡಿಕೇರಿ

# ಗೌಡರ ವಿವಾಹ ಪದ್ಧತಿಯ ಸೋಬಾನೆಗಳು

[ಹಿಂದಿನ ಸಂಚಿಕೆಯಿಂದ]

**ಉ) ಮುಡಿಲಕ್ಕಿ ತುಂಬುವ ಹಾಡು :**

ಕೃಷ್ಣ ರುಕ್ಮಿಣಿ ಸೀತಾ ದೇವಿಗೆ ಮಡಲ ತುಂಬಿರಿ। ಮಾವಯ್ಯ ಕಳುಹಿದ ಮಡಲಕ್ಕಿ ಮುತ್ತಿನ ಬಟ್ಟು ಭಾಗ್ಯದ ಸೊಸೆ ಮುಂದು ಸೆರಗೊಡ್ಡು ॥ಸೋಬಾನವೋ॥ ಅತ್ತೆಮ್ಮ ಕಳುಹಿಸಿದ ಮಡಲಕ್ಕಿ ಮುತ್ತಿನ ಬಟ್ಟು ಭಾಗ್ಯದ ಸೊಸೆ ಮುಂದು ಸೆರಗೊಡ್ಡು ॥ಸೋಬಾನವೋ॥ ಮಡಲಲ್ಲಿ ಹಚ್ಚಿನ ಬೆಲ್ಲ ತಟ್ಟೆಯಲ್ಲಿ ತೆಂಗಿನಕಾಯಿ ॥ಸೋಬಾನವೋ॥ ಮಡಲಲ್ಲಿ ಎಲೆ ಅಡಿಕೆ ತಟ್ಟೆಲಿ ಬಾಳೆಹಣ್ಣು ॥ಸೋಬಾನವೋ॥ ಮಡಲಲ್ಲಿ ಕರಿಮಣಿ ಬಿಚ್ಚೋಲೆ ತಟ್ಟೆಯಲ್ಲಿ ಸಣ್ಣಕ್ಕಿ ॥ಸೋಬಾನವೋ॥

**11. ಧಾರೆ ಆಗುವಾಗ ಹೇಳುವ ಹಾಡು :**

ತಾಯಿ ಶ್ರೀ ಕಮಲ ತಂದೆಯು ವಿಶ್ವೇಶ ॥ ಕಲ್ಯಾಣವೇ ಸೀತೆ ಕಲ್ಯಾಣವೇ॥ ತಾಯಿ ಶ್ರೀ ಕಮಲ ಎಂಬುದ ಕೇಳೀಗ ಕನ್ಯೆಗೆ ಧಾರೆ ಒದಗೀತು ॥ಕಲ್ಯಾಣವೇ ಸೀತೆ ಕಲ್ಯಾಣವೇ॥ ಕನ್ಯೆಗೆ ಧಾರೆ ಒದಗೀತೆಂಬುದು ಕೇಳಿ ಸ್ವಾಮಿಯವರಿಗೆ ಓಲೆ ಕಳುಗಿದರು ॥ಕಲ್ಯಾಣವೇ॥ ಓಲೆಗಳನ್ನು ಓದಿಸಿ ನೋಡ್ಯಾರು ಗೌಡವರೆ ಗೌಡವರೆಯಿತ್ತ ಕೇಳಿ ॥ಕಲ್ಯಾಣವೇ॥ ಗೌಡವರೆ ಕನ್ಯೆಯರ ಮನೆಗೆ ಹೋಗುತ್ತೇವೆ ॥ಕಲ್ಯಾಣವೇ॥ ಕನ್ಯೆಯರ ಮನೆಗೆ ಹೋಗುತ್ತೇವೆ ಗೌಡವರೆ ಬಚ್ಚಲ ಮನೆಗೆ ಬೆಂಕಿಯ ಹಾಕಿ ॥ಕಲ್ಯಾಣವೇ॥ ಕಾಮನ ಗುಡ್ಡಕ್ಕೆ ಬೆಂಕ್ಯಾದರು ಹಾಕ್ಯೇವು ಭೀಮನ ಗುಡ್ಡಕ್ಕೆ ನೀರು ಬೆರಸಿ ॥ಕಲ್ಯಾಣವೇ॥ ಭೀಮನ ಗುಡ್ಡಕ್ಕೆ ನೀರಾದರೆ ಬೆರಸ್ಯಾವು ನೀರು ಭೋಜನಕ್ಕೆ ಹೊರಡೆಂದು ॥ಕಲ್ಯಾಣವೇ॥ ನೀರ ಭೋಜನ ಮಾಡಿದರು. ಸ್ವಾಮಿಯವರು ಸೀಗೆಯ ಬಾಗೆ ತೆಕ್ಕೊಂಡು ॥ಕಲ್ಯಾಣವೇ॥ ಸೀಗೆ ಬಾಗೆಯ ತಕ್ಕೊಂಡು ಸ್ವಾಮಿಯವರು ನೀರು ಭೋಜನಕ್ಕೆ ಹೋದಾರು ॥ಕಲ್ಯಾಣವೇ॥ ನೀರು ಭೋಜನ ಮಾಡಿದರು ಸ್ವಾಮಿಯವರು ಒಳ್ಳೊಳ್ಳೆ ಪಂಚೆ ಉಟ್ಟಾರು ॥ಕಲ್ಯಾಣವೇ॥ ಪಾಗ ಮುಂಡಾಸ ತಲೆ ಮೇಲಿಟ್ಟುಕೊಂಡು ನೂಲಿನ ಜನಿವಾರ ಹೆಗಲಲ್ಲಿ ॥ಕಲ್ಯಾಣವೇ॥ ನೂಲಿನ ಜನಿವಾರ ಹೆಗಲ ಮೇಲಿಟ್ಟುಕೊಂಡು ನೀಟಾದ ನಾಮ ಧರಿಸ್ಯಾರು ॥ಕಲ್ಯಾಣವೇ॥ ನೀಟಾದ ನಾಮಗಳ ಧರಿಸ್ಯಾರು ಸ್ವಾಮಿಯವರು ಬೆಳ್ಳಿ ಗಿಂಡಿಯ ಜೆಳಗ್ಯಾರು ಪಾತಾಳದ ಪನ್ನೀರ ಹಿಡಿದಾರು ॥ಕಲ್ಯಾಣವೇ॥ ಕಾಗೆ ಮುಟ್ಟದ ನೀರು ಜೋಗಿ ತುಳಿಯದ ನೀರು ಪಾತಾಳದಿಂದ ಪನ್ನಿರು ॥ಕಲ್ಯಾಣವೇ॥ ಪಾತಾಳದ ಪನ್ನೀರ ಹಿಡಿದಾರು ಸ್ವಾಮಿಯವರು ನಾಗಾಬೆತ್ತವ ಕೈಯಲ್ಲಿ ॥ಕಲ್ಯಾಣವೇ॥ ನಾಗ ಬೆತ್ತವ ಕೈಯಲ್ಲಿ ತೆಕ್ಕೊಂದು ಹೂವಿನ ತೋಟಕ್ಕೆ ನಡೆದಾರು ॥ಕಲ್ಯಾಣವೇ॥ ಕನ್ನರಮನೆಗೆ ನಡೆದಾರು ಸ್ವಾಮಿಯವರು ತಾಯವ್ವ ತಾಯವ್ವಯಿತ್ತ ಕೇಳಿ ॥ಕಲ್ಯಾಣವೇ॥ ತಾಯವ್ವ ತಾಯವ್ವಯಿತ್ತ ಕೇಳಿ ತಾಯವ್ವಯಿತ್ತ ಕನ್ಯೆಗೆ ಧಾರೆ ಒದಗೀತು ॥ಕಲ್ಯಾಣವೇ॥ ಕನ್ಯೆಗೆ ಧಾರೆ ಒದಗೀ ತೆಂಬುದ ಕೇಳಿ ;ಕನ್ಯೆಯರ ಮನೆಗೆ ಹೋಗುತ್ತೇವೆ ॥ಕಲ್ಯಾಣವೇ॥ ನಂದಾದೀವಿಗೆಗೆ ಆರ್ಯೆದು ಶರಣಾವ ಮಾಡಿ ತಾಯಿ ಪಾದಕೆ ಶರಣೆಂದು ॥ಕಲ್ಯಾಣವೇ॥ ತಾಯಿ ಪಾದಕ್ಕೆ ಶರಣಾವ ಮಾಡಿ ಮುತ್ತಿನ ಮೆಟ್ಟುಕಲ್ಲು ಇಳಿದಾರು ॥ಕಲ್ಯಾಣವೇ॥ ಮುತ್ತಿನ ಮೆಟ್ಟು ಕಲ್ಲು ಇಳಿದಾರು ಸ್ವಾಮಿಯವರು ಕನ್ಯೆ ಅರಮನೆಗೆ ಹೋದಾರು ॥ಕಲ್ಯಾಣವೇ॥ ಕನ್ಯೆ ಅರಮನೆಗೆ ಹೋದಾರು ಸ್ವಾಮಿಯವರು ಕನ್ಯೆಗೆ ಧಾರೆ ಒದಗೀತು ॥ಕಲ್ಯಾಣವೇ॥ ನುಗ್ಗೆ ಮರದಡಿಯಲ್ಲಿ ನುಗ್ಗಿ ಬರುವ ಹಾರುವಯ್ಯ ಕನ್ಯೆಗೆ ಧಾರೆ ಒದಗೀತು ॥ಕಲ್ಯಾಣವೇ॥ ಕನ್ಯೆಗೆ ಧಾರೆ ಒದಗೀತೆಂಬುದ ಕೇಳಿ ಕನ್ಯೆಯರ ಮನೆಗೆ ಹೋಗುತ್ತೇವೆ ॥ಕಲ್ಯಾಣವೇ॥ ಹಲಸಿನ ಮರದಡಿಯಲ್ಲಿ ಹತ್ತಿ ಬರುವ ಹಾರುವಯ್ಯ ಕನ್ಯೆಗೆ ಧಾರೆ ಒದಗೀತು ॥ಕಲ್ಯಾಣವೇ॥ ಕನ್ಯೆಗೆ ಧಾರೆ ಒದಗೀತೆಂಬುದ ಕೇಳಿ ಕನ್ಯೆಯರ ಮನೆಗೆ ಹೋಗುತ್ತೇವೆ ॥ಕಲ್ಯಾಣವೇ॥ ಬಾಳೆ ಮರದಡಿಯಲ್ಲಿ ಬಗ್ಗಿ ಬರುವ ಹಾರುವಯ್ಯ ಕನ್ಯೆಗೆ ಧಾರೆ ಒದಗೀತು ॥ಕಲ್ಯಾಣವೇ॥ ಕನ್ಯೆಗೆ ಧಾರೆ ಒದಗೀತೆಂಬುದ ಕೇಳಿ ಕನ್ಯೆಯರ ಮನೆಗೆ ಹೋಗುತ್ತೇವೆ ॥ಕಲ್ಯಾಣವೇ॥ ಕಂದನ ಕೈ ಕೆಳಗೆ ಕನ್ಯೆಯ ಕೈ ಮೇಲೆ ಕನ್ಯೆಗೆ ಧಾರೆ ಎರೆದಾರು ॥ಕಲ್ಯಾಣವೇ॥ ಕಂದಾನ ಕೈ ಕೆಳಗೆ ಕನ್ಯೆಯ ಕೈ ಮೇಲೆ ಕನ್ಯೆಗೆ ಧಾರೆ ಎರೆದಾರು ॥ಕಲ್ಯಾಣವೇ॥

[ಮುಂದುವರೆಯುವುದು]

## ನಿಮಗಿದು ತಿಳಿದಿರಲಿ

| | | |
|---|---|---|
| ವ್ಹೇಲ ಮೀನಿನ ಮೆದುಳಿನ ತೂಕ | : : | 7000 ಗ್ರಾಂ |
| ಆನೆಯ ಮೆದುಳಿನ ತೂಕ | : : | 5200 ಗ್ರಾಂ |
| ಗೋರಿಲ್ಲಾದ ಮೆದುಳಿನ ತೂಕ | : : | 500 ಗ್ರಾಂ |
| ನಾಯಿಯ ಮೆದುಳಿನ ತೂಕ | : : | 130 ಗ್ರಾಂ |
| ಕುದುರೆಯ ಮೆದುಳಿನ ತೂಕ | : : | 650 ಗ್ರಾಂ |
| ಬೆಕ್ಕಿನ ಮೆದುಳಿನ ತೂಕ | : : | 30 ಗ್ರಾಂ |
| ಘೇಂಡಾಮೃಗದ ಮೆದುಳಿನ ತೂಕ | : : | 600 ಗ್ರಾಂ |
| ಇಲಿಯ ಮೆದುಳಿನ ತೂಕ | : : | 04 ಗ್ರಾಂ |

—ಸಂಗ್ರಹ : **ಚೆರಿಯಮನೆ ಈಶ್ವರ ರಾಜೇಶ್ (ಮಧು)**
ಮೇಕೇರಿ.

# ಹುತ್ತರಿ (ಪುತ್ತರಿ)

ಕೊಡಗು ಜಿಲ್ಲೆ ಕರ್ನಾಟಕದ ಒಂದು ಅವಿಭಾಗ್ಯ ಅಂಗ. ಹಿಂದೆ ಇದಕ್ಕೆ ರಾಜ್ಯದ ಪ್ರಾತಿನಿಧ್ಯತೆ ಇತ್ತು. ಮಡಿಕೇರಿ ಜಿಲ್ಲಾ ಕೇಂದ್ರ. ಇಲ್ಲಿ ಅರೆಭಾಷೆ ಗೌಡರು, ವಕ್ಕಲಿಗರು, ಕೊಡಗರು, ಹರಿಜನ–ಗಿರಿ ಜನರು ವಾಸವಾಗಿದ್ದಾರೆ. ಇಲ್ಲಿನ ಜನರ ಮುಖ್ಯ ಕಸುಬು ಕೃಷಿ. ಕೊಡಗಿನ ಜನರು ಎಲ್ಲಾ ಹಬ್ಬಗಳನ್ನು ಆಚರಿಸುವುದರೊಂದಿಗೆ ನಾಡಹಬ್ಬವಾದ ಕೈಲ್ ಮುಹೂರ್ತ, ಕಾವೇರಿ ಸಂಕ್ರಮಣ ಹಾಗೂ ಹುತ್ತರಿ ಹಬ್ಬವನ್ನು ಆಚರಿಸುವುದು ಒಂದು ವಿಶೇಷತೆ.

ಹುತ್ತರಿ ಎನ್ನುವುದು ಕೇರಳದ ಪುತ್ತರಿ ಎಂಬ ಮೂಲ ಪದದಿಂದ ಬಂದದ್ದು. ಪುತ್ತರಿ ಅಥವಾ ಹುತ್ತರಿ ಎಂದರೆ ಹೊಸ ಅಕ್ಕಿ ಎಂದರ್ಥ. ಈ ಹಬ್ಬವನ್ನು ಕೊಡಗಿನ ಜನರು ಅತಿಯಾದ ಭಕ್ತಿಯಿಂದ ಆಚರಿಸುತ್ತಾರೆ. ಹಬ್ಬಕ್ಕೆ 1 ವಾರಕ್ಕೆ ಮೊದಲು ಕೊಡಗಿನ ಮೂಲ ದೇವರಾದ ಶ್ರೀ ಪಾಡಿ ಇಗ್ಗುತ್ತಪ್ಪ ದೇವಸ್ಥಾನದಲ್ಲಿ ಕಟ್ಟು ಬೀಳುತ್ತದೆ. ಕಟ್ಟು ಬೀಳುವುದೆಂದರೆ, ಹಸಿ ಕಡಿಯಬಾರದು, ಒಣಗಿಲು ಮುರಿಯಬಾರದು, ಭೇಟೆಯಾಡಬಾರದು ತೆಂಗಿನಕಾಯಿ ಒಡೆಯಬಾರದು, ತವ್ವ [ಓಡು] ಒಲೆ ಮೇಲೆ ಇಡಬಾರದು ಎಂಬಿತ್ಯಾದಿ ಕಟ್ಟು ಕಟ್ಟಳೆಗಳನ್ನು ಬಿಗಿಯುತ್ತಾರೆ. ಈ ಕಟ್ಟಳೆಗಳನ್ನು ಕಟ್ಟು ಬಿದ್ದಾಗಲಿಂದ ಇಗ್ಗುತಪ್ಪ ದೇವಸ್ಥಾನವಲ್ಲಿ ಹಬ್ಬ [ಕಲಾಡ್ಚ] ಮುಗಿಯುವವರೆಗೆ ಅನುಸರಿಸಬೇಕು. ಇದನ್ನು ಮೀರಿ ಯಾರೂ ನಡೆಯುವಂತಿಲ್ಲ.

ಹುತ್ತರಿ ಹಬ್ಬವು ಸಾಮಾನ್ಯವಾಗಿ ನವೆಂಬರ್ ಮತ್ತು ಡಿಸೆಂಬರ್ ತಿಂಗಳಲ್ಲಿ ನಡೆಯುತ್ತದೆ. ಒಂದು ವರ್ಷ ನವೆಂಬರ್ ನಲ್ಲಾದರೆ ಅದಕ್ಕೆ ಎಳೆಯ [ಪೀಚೆ] ಹುತ್ತರಿ ಎಂದೂ ಡಿಸೆಂಬರ್‌ನಲ್ಲಾದರೆ ಬೆಳೆದ ಹುತ್ತರಿ ಎಂದೂ ಕರೆಯುತ್ತಾರೆ. ಹುತ್ತರಿ ಸಾಮಾನ್ಯವಾಗಿ ರೋಹಿಣಿ ನಕ್ಷತ್ರದಲ್ಲೇ ಬರುವುದು.

ಶ್ರೀ ಇಗ್ಗುತಪ್ಪ ದೇವಸ್ಥಾನದಲ್ಲಿ ಕಲಾಡ್ಚ ನಡೆದದಿನ ರಾತ್ರಿ ದೇವಸ್ಥಾನದಿಂದ ದೇವರನ್ನು ಹೊತ್ತುಕೊಂಡು ಜಾತ್ರೆಯಲ್ಲಿ ಮಲ್ಮ ಎಂಬ ಸ್ಥಳಕ್ಕೆ ಹೋಗಿ ಅಲ್ಲಿ ಕದಿರು ತೆಗೆದ ನಂತರ ಅವರವರ ಮನೆಯಲ್ಲಿ ಕದಿರು ತೆಗೆಯುವುದು ವಾಡಿಕೆ. ಮಲ್ಮ ಎಂದರೆ, ಶ್ರೀ ತಲಕಾವೇರಿ ಕುಂಡಿಕೆಯಲ್ಲಿ ಜಲ ಉದ್ಭವವಾಗುವ ಸ್ಥಳವು ಎಷ್ಟು ಪವಿತ್ರವೋ ಅಷ್ಟೇ ಪವಿತ್ರವಾದ ಸ್ಥಳ ಈ ಮಲ್ಮ. ಇದು ಬೆಟ್ಟದ ತುದಿಯಲ್ಲಿದೆ. ಆ ಬೆಟ್ಟದ ತುದಿಯಲ್ಲಿ ಗದ್ದೆಯನ್ನು ಮಾಡಿದ್ದಾರೆ. ಅಲ್ಲೇ ದೇವರು ಕದಿರು ತೆಗೆಯುವುದು. ಆದ್ದರಿಂದಲೇ ಕೊಡಗಿನ ಜನರು ಕದಿರು ತೆಗೆಯುವ ಮೊದಲು ಶ್ರೀ ಇಗ್ಗುತಪ್ಪ ಕಾವೇರಮ್ಮನ ನೆನೆಯುವುದು.

ಕೊಡಗಿನ ಜನರು ಈ ಹಬ್ಬಕ್ಕೆ 15 ದಿನಸಕ್ಕೆ ಮೊದಲು ಮನೆಯನ್ನು ಸುಣ್ಣ ಬಣ್ಣಗಳಿಂದ ಸ್ವಚ್ಛಗೊಳಿಸಲು ಪ್ರಾರಂಭಿಸುವರು. ವರ್ಷದಲ್ಲಿ ಈ ಹಬ್ಬದ ನೆಪದಲ್ಲಿ ಮನೆ, ಮನೆಯ ಅಂಗಳ, ಒಕ್ಕಲು, ಕಣ, ನಡೆದಾಡುವ ದಾರಿ ಸ್ವಚ್ಛವಾಗುವುದು. ಹಬ್ಬದ ದಿನ ಎಲ್ಲರೂ ಸ್ನಾನ ಮಾಡಿ, ಮಡಿ ಬಟ್ಟೆಯನ್ನು ತೊಟ್ಟು, ಹೂ, ತೋರಣಗಳಿಂದ ಮನೆಯನ್ನು ಶೃಂಗರಿಸಿ. ಅಂಗಳ ಸಾರಿಸಿ, ಅಂಗಳದ ಮಧ್ಯೆ ಬೆ:ಟ ನೆಡುವರು. ರಾತ್ರಿ ಕದಿರು ಕೊಯ್ಯುವ ಮೊದಲು ನೆರೆ ಕಟ್ಟುವರು, ಅನಂತರ ಗದ್ದೆಗೆ ಹೋಗಿ ಕದಿರು ತೆಗೆಯಲು ಹೋಗುವರು. ಆಗ ನೆಲ್ಲಕ್ಕಿಯಲ್ಲಿ ದೇವರಿಗೆ ಅಕ್ಕಿ ಹಾಕಿ ಹಿರಿಯರ ಕಾಲು ಮುಟ್ಟಿ ನಮಸ್ಕಾರ ಮಾಡುವುದು ಪದ್ಧತಿ. ನಂತರ ಗದ್ದೆಗೆ ಹೋಗಿ ಕದಿರು ತೆಗೆಯುವರು. ಆಗ ಶ್ರೀ ಇಗ್ಗುತಪ್ಪ ಕಾವೇರಮ್ಮನ 3 ಬಾರಿ ಕರೆಯುವರು. ಆಗ ಮೇಲಕ್ಕೆ ಗುಂಡು ಹೊಡೆಯುವುದು ರೂಢಿ. ನಂತರ ಎಲ್ಲರೂ ಪಟಾಕಿ ಸಿಡಿಸುತ್ತಾ ಮನೆಗೆ ಬಂದು ಎಲ್ಲಾ ಮುಖ್ಯವಾದ ಸ್ಥಳಗಳಲ್ಲಿ ಕದಿರು ಕಟ್ಟಿ ನಂತರ ಎಲ್ಲರೂ ಒಂದುಗೂಡಿ ಊಟ ಮಾಡುವರು. ಮೊದಲು ಒಂದೊಂದು ಕುಟುಂಬದವರು ಒಟ್ಟಾಗಿ ಸೇರಿ ಐನ್ ಮನೆಯಲ್ಲಿ ಕದಿರು ತೆಗೆದು, ಒಟ್ಟಾಗಿ ಊಟಮಾಡಿ ಸಂತೋಷವನ್ನು ಹಂಚಿಕೊಂಡು ಅವರವರ ಮನೆಗಳಿಗೆ ಹೋಗುತ್ತಿದ್ದರು. ಇತ್ತೀಚೆಗೆ ಅವರವರ ಮನೆಗಳಲ್ಲಿ ಅವರವರು ಕದಿರು ತೆಗೆಯುವುದು ಕಾಣಬರುತ್ತದೆ. ಹಿಂದಿನ ಒಗ್ಗಟ್ಟು ಈಗ ಇಲ್ಲದಾಗಿದೆ.

ಈ ಹಬ್ಬದಲ್ಲಿ ಕುಶಲಕ್ಕಿ ಹುರಿದು ಅದರ ಪುಡಿಯಿಂದ ಬಾಳೆಹಣ್ಣು ಹಾಕಿ ಕಲಸಿ ಮಾಡಿದ ತಂಬಿಟ್ಟು ಹಾಗೂ ಹುತ್ತರಿ ಗೆಣಸಿನ ಸಾರು ವಿಶೇಷ. ಹೊಸದಾಗಿ ತಂದ ಕದಿರಿನ 4 ಕಾಳು ಭತ್ತವನ್ನು ಮೊದಲೇ ಸಿದ್ಧಪಡಿಸಿದ ಪಾಯಸಕ್ಕೆ ಹಾಕಿ ಹೊಸಕ್ಕಿ ಪಾಯಸವೆಂದು ಊಟ ಮಾಡುತ್ತಾರೆ. ●

—ಮುಣ್ಣೀಂದ್ರ ರಮೇಶ್,
ಮೈಸೂರು.

## ನಗೆ ಹನಿ

ಸುನಂದಮ್ಮ–ಏನು ಇವ್ರೆ ತುಂಬಾ ದಿವಸ ಆಯ್ತು ನಿಮ್ಮನ್ನು ಕಾಣದೆ

ಸಾವಿತ್ರಮ್ಮ–ಹೌದು, ಮನೆಯಲ್ಲಿ ಪುರುಸೊತ್ತೇ ಇಲ್ಲ. ತುಂಬಾ ಕೆಲಸ ಇತ್ತು.

ಸುನಂದಮ್ಮ–ಹೀಗೆ ಇರಬೇಕು, ನೆರೆ ಕೆರೆಯವರು ಪೀಸ್ ಪೀಸ್ ಆಗಿ [ಶಾಂತಿಯಾಗಿ]

—ಸಂಗಾರು ಅಜಯ್ ಉತ್ತಪ್ಪ,
ಮಡಿಕೇರಿ.

# ಕೊಡಗಿನ ವಿವಿಧ ಜನಾಂಗದ ನಾಯಕ ಮಣಿಗಳ ಮನದಾಳದಲ್ಲಿ ಗುಡ್ಡೆಮನೆ ಅಪ್ಪಯ್ಯಗೌಡ

ದಿನಾಂಕ 31-10-98ರಂದು ಮಡಿಕೇರಿಯ ಕೋಟೆಯ ಆವರಣದಲ್ಲಿ ನೂರಾರು ಸಂಖ್ಯೆಯಲ್ಲಿ ನೆರೆದಿದ್ದ ಅಭಿಮಾನಿಗಳು ಅಮರ ಸುಳ್ಯ ರೈತ ಕ್ರಾಂತಿ ಗುಡ್ಡೆಮನೆ ಅಪ್ಪಯ್ಯಗೌಡರ ನೇತೃತ್ವದಲ್ಲಿ ಪಾಲ್ಗೊಂಡು ಹುತಾತ್ಮರಾದ ತಮ್ಮ ಹಿರಿಯರ ಸೇವೆಯ ನೆನಪಿಗಾಗಿ ಒಗ್ಗೂಡಿ 2 ನಿಮಿಷಗಳ ಮೌನವ್ರತವನ್ನು ಆಚರಿಸಿ, ಪ್ರತಿವರ್ಷ ಅ. 31ನ್ನು ಬಲಿದಾನದ ದಿನವನ್ನಾಗಿ ಆಚರಿಸುವಂತೆ ನಿಶ್ಚಯಿಸಿ, 1837ರ ಅಕ್ಟೋಬರ್ 31ರಂದು ಬೆಳಿಗ್ಗೆ 11 ಗಂಟೆಗೆ ಮಡಿಕೇರಿ ಕೋಟೆಯ ಆವರಣದಲ್ಲಿ ಗಲ್ಲಿಗೇರಿದ ದಿನವನ್ನು "ಬಲಿದಾನ ದಿನವನ್ನಾಗಿ" ಆಚರಿಸುವ ಕೊಡಗಿನ ಸರ್ವ ಜನರ ನಿಯೋಗವೊಂದು ಜಿಲ್ಲಾಧಿಕಾರಿಗಳಿಗೆ ಮನವಿ ಪತ್ರವನ್ನು ಸಲ್ಲಿಸಿತು.

ಗುಡ್ಡೆಮನೆ ಅಪ್ಪಯ್ಯಗೌಡರ ಬಗ್ಗೆ ಕೊಡಗಿನ ವಿವಿಧ ಜನಾಂಗದ ನಾಯಕರುಗಳು ತಮ್ಮ ತಮ್ಮ ರೀತಿಯಲ್ಲಿ ವ್ಯಾಖ್ಯಾನಿಸಿದರು. ಭಾರತದ ಸ್ವಾತಂತ್ರ್ಯ ಹೋರಾಟಗಾರ ವರ್ಕಿಂಗ್ ಕಮಿಟಿಯ ಸದಸ್ಯರಾದ ಎಂ. ಯು. ಅಚ್ಚಣ್ಣನವರು ಉದ್ಘಾಟಿಸಿ ಮಾತನಾಡಿದರು. ಅವರು ಕೊಡಗಿನ ಸ್ವಾತಂತ್ರ್ಯ ಹೋರಾಟಗಾರರ ಪಟ್ಟಿಯನ್ನು ತಯಾರಿಸಿ ಮಾಹಿತಿ ನೀಡುವಂತೆ ಕೋರಿದರಲ್ಲದೆ ಸ್ವಾತಂತ್ರ್ಯ ಹೋರಾಟಗಾರರನ್ನು ನೆನೆಯಬೇಕು. ಇಲ್ಲಿ ಕೊನೆಯ ಪಕ್ಷ ನೆನೆಯದೇ ಹೋದರೆ ನಾವು ಏನನ್ನು ಸಾಧಿಸಿದ್ದಾಗೆ ಆಯಿತು ಎಂದು ಪ್ರಶ್ನೆ ಹಾಕಿದರು. ಕೊಡಗು ಗೌಡ ಸಮಾಜ ಅಧ್ಯಕ್ಷರಾದ ತೋಟಂಬೈಲು ನಾಣಯ್ಯನವರು ಮಾತನಾಡಿ ಎಲ್ಲಾ ಜನಾಂಗದವರು ಸೇರಿ ಕಾರ್ಯಕ್ರಮವನ್ನು ಹಮ್ಮಿಕೊಂಡು ಈ ಬಗ್ಗೆ ಸರಕಾರದ ಗಮನ ಸೆಳೆಯಬೇಕೆಂದು ಒತ್ತುಕೊಟ್ಟು ಮಾತನಾಡಿದರು. ನಂತರ ಮಾತನಾಡಿದ ಮಾಜಿ ಸಚಿವ ದಂಬೆಕೋಡಿ ಚಿಣ್ಣಪ್ಪನವರು, ಕೊಡಗಿನ ಇತಿಹಾಸದಲ್ಲಿಯೇ ಗಲ್ಲಿಗೇರಿದ ಪ್ರಥಮ ಏಕೈಕ ಸ್ವಾತಂತ್ರ್ಯ ಹೋರಾಟಗಾರರಾಗಿದ್ದಲ್ಲದೆ, ಅಂದು ಅವರು ಸಂಘಟಿಸಿದ ಹತ್ತು ಸಾವಿರ ಸ್ವಾತಂತ್ರ್ಯ ಹೋರಾಟಗಾರರನ್ನು ನೆನೆಸಿದರೆ ಇಂದು ನಮಗೆ 500 ಜನ ಸೇರಿಸುವುದು ಕಷ್ಟವಾಗಿ ಪರಿಣಮಿಸುತ್ತದೆ. ಆಗ ಅವರ ಸಂಘಟನಾ ಶಕ್ತಿ ಹೇಗಿದ್ದಿರಬಹುದು ಎಂಬ ಪ್ರಶ್ನೆ ನಮ್ಮಲ್ಲಿ ಮೂಡುತ್ತದೆ. ಈ ಬಲಿದಾನದ ದಿನವನ್ನು ರಾಷ್ಟ್ರಮಟ್ಟದಲ್ಲಿ ಮೊದಲ ಪಂಕ್ತಿಯ ನಾಯಕರ ಜೊತೆಯಲ್ಲಿ ಸ್ಮರಿಸಬೇಕಾಗಿದೆ ಎಂದು ಹೇಳಿದರು.

ಅಮ್ಮ ಕೊಡವ ಸಮಾಜದ ಅಧ್ಯಕ್ಷರಾದ ನಾಣಿಯಂಡ ಕೃಷ್ಣ ಮಾತನಾಡಿ ಇಂದಿನ ದಿನವನ್ನು ಬಲಿದಾನದ ದಿನವನ್ನಾಗಿ ಆಚರಿಸುವಂತೆ ಒತ್ತು ನೀಡಿ, ಈ ಆಚರಣೆಗೆ ಜನಾಂಗಿಯ ಬಣ್ಣ ಬಾರದ ಹಾಗೆ ಪ್ರತಿಯೊಬ್ಬರು ನಡೆಸುವಂತಾಗಬೇಕೆಂದರು. ಶ್ರೇಷ್ಠ ವಕೀಲರಾದ ಶ್ರೀ ಕೆ.ಪಿ. ಸುಬ್ರಮಣ್ಯನವರು ಮಾತನಾಡಿ ಇಂದಿನ ದಿನವನ್ನು ಶ್ರೇಷ್ಠ ದಿನವೆಂದು ಅಪ್ಪಯ್ಯಗೌಡ ಹಾಗೂ ಇತರರು ಗಲ್ಲಿಗೇರಿದ ಜಾಗದಲ್ಲಿ ಒಂದು ಸ್ಮಾರಕವನ್ನು ಸ್ಥಾಪಿಸುವಂತೆ ಸರಕಾರವನ್ನು ಒತ್ತಾಯಿಸಿದರಲ್ಲದೆ ಮುಂದಿನ ಪೀಳಿಗೆಗೆ ಇವರ ಜೀವನ ಚರಿತ್ರೆಯನ್ನು ಪಠ್ಯ ಪುಸ್ತಕವನ್ನಾಗಿ ಮಾಡುವುದಲ್ಲದೆ ಕೊಡಗಿನ ಮಹಿಳೆ ಮತ್ತು ಮಕ್ಕಳಾದಿಯಾಗಿ ಇವರುಗಳ ಜೀವನ ಚರಿತ್ರೆಯ ಅರಿವನ್ನು ಮೂಡಿಸಬೇಕೆಂದರು. ಮುಂದುವರಿದು ಅಪ್ಪಯ್ಯಗೌಡರ ಈ ಬಲಿದಾನ ನಮ್ಮನ್ನು ಕೊಡಗಿನಲ್ಲಿ ತಲೆಎತ್ತಿ ನಡೆಯುವಂತೆ ಮಾಡಿದೆಯೆಂದರು.

ಕೊಡಗು ಪ್ರಜಾವೇದಿಕೆಯ ಅಧ್ಯಕ್ಷರಾದ ಶ್ರೀ ದೇವಿಪ್ರಸಾದ್ ಮಾತನಾಡಿ ಅಪ್ಪಯ್ಯಗೌಡರನ್ನು ಗಲ್ಲಿಗೇರಿಸುವಾಗ ಕೊಡಗಿನ ಎಲ್ಲಾ ಗೌಡ ಪಟೇಲರನ್ನು ಕರೆಯಿಸಿ ಅವರ ಸಮ್ಮುಖದಲ್ಲಿ ಗಲ್ಲಿಗೇರಿಸಿದ್ದಾಗಿದೆ. ಇದು ಸರ್ವತ ಖಂಡನೀಯ ಹಾಗೂ ಜನಾಂಗಕ್ಕೆ ಮಾಡಿದ ಘೋರ ಅನ್ಯಾಯ, ಅಪಮಾನ. ನಾವುಗಳು 5-4-1998ರಲ್ಲಿ ಮಂಗಳೂರಿನ ಬಾವುಟ ಗುಡ್ಡೆಯಲ್ಲಿ, ಸುಳ್ಯದಿಂದ ಜಾಥಾ ಹೊರಟು ಸ್ಮರಿಸಿದಲ್ಲದೆ ಸರಕಾರದ ಗಮನವನ್ನು ಸಹ ಸೆಳೆದಿದ್ದೇವೆ. ಅದರ ಬಗ್ಗೆ ಬಜೆಟ್ ಕಳುಹಿಸುವಂತೆ ಸರ್ಕಾರ ನನ್ನನ್ನು ಕೇಳಿದೆ ಎಂದರು. ಅನಂತರ ಮಾತನಾಡಿದ ಕುದುಕುಳಿ ಸುಬ್ಬಯ್ಯನವರು ಇಂತಹ ಸ್ವಾತಂತ್ರ್ಯ ಹೋರಾಟಗಾರರನ್ನು ನೆನೆಸದ ಕೊಡಗು ಸರಕಾರ ಇದೆಂತಹ ಸರಕಾರವೆಂದರಲ್ಲದೆ ಕೊಡಗು ಸರಕಾರ ಮತ್ತೆ ಏನು ಮಾಡಿದೆ ಎಂದು ಖಾರವಾಗಿ ನುಡಿದರಲ್ಲದೆ, ಒಂದು ವರ್ಷದೊಳಗೆ ಅಪ್ಪಯ್ಯಗೌಡರ ಪ್ರತಿಮೆ ಸ್ಥಾಪನೆ ಆಗಲೇಬೇಕೆಂದರು. ಆಗದೆ ಹೋದರೆ ವರ್ಷಂಪ್ರತಿ 5ರಿಂದ 10 ಸಾವಿರ ಜನರನ್ನು ಸೇರಿಸಿ ಸರಕಾರವನ್ನು ಒತ್ತಾಯಿಸುವಂತೆ ಕರೆಕೊಟ್ಟರು.

ಹೆಗ್ಗಡೆ ಸಮಾಜದ ಅಧ್ಯಕ್ಷರಾದ ಕೆ. ಯಂ. ಸುಬ್ಬಯ್ಯನವರು ಮಾತನಾಡಿ ಇಂದು ನಮಗೆ ಬಹಳ ಮಹತ್ವದ ದಿನವೆಂದರಲ್ಲದೆ, ಇವರು ಅಂದು ಕೋಟೆಯೊಳಗೆ ಬಂದು ಕೆಚ್ಚೆದೆಯಿಂದ ಹೊರಾಡಿದರೆಂದರೆ ಬಹಳ ದೊಡ್ಡ ಸಾಧನೆ. ಇದು ಬಾಯಲ್ಲಿ ಹೇಳಲು ಸುಲಭವಾದರೂ ಮಾಡಿದವರಿಗೆ ಗೊತ್ತೆಂದರಲ್ಲದೆ ಮುಂಬರುವ ವರ್ಷದಲ್ಲಿ ಸಾಕಷ್ಟು ಪ್ರಚಾರ ತಂದು ಸರಕಾರದ ಗಮನ ಸೆಳೆಯಬೇಕೆಂದು ಕರೆಯಿತ್ತರು.

ವಕೀಲರಾದ ವಿದ್ಯಾಧರರವರು ಮಾತನಾಡಿ ಈ ಮೇಲಿನ ಸಂಗ್ರಾಮದ ಬಗ್ಗೆ ಹೆಚ್ಚಿನ ಸಂಶೋಧನೆ ಮಾಡಲು ನಾನು

ಮುಂದೆ ಬಂದಿರುವೆನಲ್ಲದೆ ನನಗೆ ಅಪ್ಪಯ್ಯಗೌಡ ಸಂಸ್ಮರಣಾ ಸಮಿತಿಯೂ ಪೂರ್ಣ ಅಧಿಕಾರ ಕೊಟ್ಟಿದೆಯೆಂದರು. ಸ್ವಾತಂತ್ರ್ಯ ಸಂಗ್ರಾಮಕ್ಕೆ ಹೋರಾಡಿದ ಸ್ವಾಮಿ ಅಪರಂಪರ, ಪುಟ್ಟಬಸಪ್ಪ ಉತ್ತು, ಕರ್ತು, ಚಟ್ಟಿಕುಡಿಯ, ಶೇಕ್ ರೈ, ಹುಲಿಕೊಂದ ನಂಜಯ್ಯ, ರಾಮೇಗೌಡ, ಅಣ್ಣೇಗೌಡ, ಕುಕ್ಕುನೂರು ಚನ್ನಯ್ಯ ಇವರುಗಳ ಹೆಸರು ಬಿಟ್ಟುಹೋಗಿದೆ, ಈ ಸಂದರ್ಭದಲ್ಲಿ ಅವರನ್ನು ನೆನೆಯಬೇಕೆಂದರು. ಈ ಸಭೆಯಲ್ಲಿ ಜಿಲ್ಲಾ ಪಂಚಾಯಿತ್ತಿ ಉಪಾಧ್ಯಕ್ಷೆ ಕಮಲ ಗಣಪತಿ, ಮಡಿಕೇರಿ ಮಾಜಿ ಮೇಯರ್ ಮುಕ್ಕಾಟಿ ವಾಸುರವರು, ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷರಾದ ಕುಯ್ಯಮುಡಿ ಪೂರ್ಣಯ್ಯ, ಕೊಡಗು ಗೌಡ ಸಾ. ಅ. ಅಧ್ಯಕ್ಷರಾದ ತುಂತ್ತಜ್ಜೆ ಗಣೇಶ್‌ರವರು, ಗೌಡ ಮಹಿಳಾ ಸಂಘಟನೆಯ ಅಧ್ಯಕ್ಷೆ ಚೀಯಂಡಿ ರಾಧಯಾಧವ್ ಹಾಗೂ ಕೊಡಗು ಸಂಗಾತಿಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರ್‌ರವರು ಹಾಜರಿದ್ದರು

ಬೇಕಲ್ ರಾಮನಾಥ್‌ರವರು ಸ್ವಾಗತಿಸಿದರು, ಗುಡ್ಡೆಮನೆ ಅಪ್ಪಯ್ಯಗೌಡ ಸಂಸ್ಮರಣಾ ಸಮಿತಿಯ ಸಂಚಾಲಕರಾದ ಗುಡ್ಡೆ ಮನೆ ರಮೇಶ್ ಬೆಳ್ಯಪ್ಪನವರು ನಿರೂಪಿಸಿದರೆ, ಕಿಶೋರ್ ಕುಟ್ಟಪ್ಪ ವಂದಿಸಿದರು. ●

—ಸಂಗಾತಿ ವರದಿ

## ಸಂಗಾತಿ ಪ್ರಶ್ನಾವಳಿ 4ಕ್ಕೆ ಪ್ರಶ್ನೆಗಳು

1. ಮಾಲ್ಗುಡಿಡೇಸ್ ದೂರದರ್ಶನ ಧಾರವಾಹಿಯನ್ನು ನಿರ್ದೇಶಿಸಿದವರಾರು ?

2. ಇತ್ತೀಚೆಗೆ ಭಾರತವು ಅಣುಬಾಂಬನ್ನು ಪರೀಕ್ಷಿಸಿದ ಸ್ಥಳ ಯಾವುದು ?

3. ದಿ ಬ್ಯಾಂಡಿಟ್ ಕ್ವೀನ್ ಚಲನಚಿತ್ರದಲ್ಲಿ ಫೂಲನ್ ದೇವಿಯ ಪಾತ್ರದಲ್ಲಿ ನಟಿಸಿದ ಕಲಾವಿದೆ ಯಾರು ?

4. 1984ರಲ್ಲಿ ಎವರೆಸ್ಟ್ ಶಿಖರವನ್ನು ಹತ್ತಿ ವಿಶ್ವ ವಿಖ್ಯಾತರಾದವರು ಯಾರು ?

5. ಕಾಮನ ಬಿಲ್ಲಿನಲ್ಲಿ ಕಪ್ಪು ಬಣ್ಣವಿಲ್ಲ ಎಂಬುದು ಸುಳ್ಳೋ, ನಿಜವೋ ?

## ಪ್ರಶ್ನಾವಳಿ 3ಕ್ಕೆ ಉತ್ತರ

1. ಚಿರತೆ
2. ಗೋಡೆ
3. ಕೌಸಲ್ಯ
4. ಹಬೆಯಿಂದ
5. 1984

**ಪ್ರಶ್ನಾವಳಿ 3ರ ಬಹುಮಾನ ವಿಜೇತರು**

ವಿನುತ ಮಾಚಯ್ಯ, ಮಡಿಕೇರಿ.

**ವಿ. ಸೂ. :** ಪ್ರಶ್ನಾವಳಿಯಲ್ಲಿ ಪ್ರಕಟಗೊಂಡ ಪ್ರಶ್ನೆಗಳಿಗೆ ನಿಮ್ಮ ಉತ್ತರವನ್ನು ಡಿಸೆಂಬರ್ **10** ರೊಳಗೆ ಕಳುಹಿಸಿ.

## ಮಡಿಕೇರಿ ಶಾಸಕ ದಂಬೆಕೋಡಿ ಮಾದಪ್ಪನವರ ಮನೆ ಮೇಲೆ ಗುಂಡಿನ ಧಾಳಿ ಕೊಡಗು ಸಂಗಾತಿಯು ಖಂಡನೆ

ದಿನಾಂಕ 31–10–1998ರ ಬೆಳಗಿನ ಜಾವ ಶಾಸಕ ದಂಬೆಕೋಡಿ ಮಾದಪ್ಪನವರ ಕಗ್ಗೋಡ್ಲುವಿನ ನಿವಾಸದ ಮೇಲೆ ದುಷ್ಕರ್ಮಿಗಳು ನಡೆಯಿಸಿದ ಗುಂಡಿನಧಾಳಿ ಇಡೀ ನಮ್ಮ ಜನಾಂಗವನ್ನು ತಲ್ಲಣಗೊಳಿಸಿದೆ. ಜನಾಂಗದ ಜನನಾಯಕರಾದ ಇವರಿಗೆ ನಾವು ಪಕ್ಷ ಭೇದ ಮರೆತು ಆಯುರಾರೋಗ್ಯ ಭಾಗ್ಯವನ್ನು ಕುಲಗುರು ವೆಂಕಟರಮಣನು ದಯಪಾಲಿಸಲೆಂದು ಪ್ರಾರ್ಥಿಸೋಣ. ಹಿಂದೆ ಪುತ್ತೂರಿನ ಶಾಸಕರಾದ ಸದಾನಂದ ಗೌಡರಿಗೂ ಈ ರೀತಿಯ ಬೆದರಿಕೆ ಒಡ್ಡಿದ್ದು ಸಹ ಖಂಡನೀಯವಾಗಿದೆ. ಇಬ್ಬರು ಜನನಾಯಕರುಗಳಿಗೆ ಎದುರಾದ ಈ ಸನ್ನಿವೇಶವನ್ನು **ಕೊಡಗು ಸಂಗಾತಿ ಅತೀ ತೀವ್ರವಾಗಿ ಖಂಡಿಸುತ್ತದೆ.** ಅಲ್ಲದೆ ಜನಾಂಗದವರು ಈ ಬಗ್ಗೆ ಆಳವಾಗಿ ಚಿಂತಿಸಬೇಕೆಂದು ಸಹ ಜನಾಂಗದವರಲ್ಲಿ ಮನವಿ ಮಾಡುತ್ತದೆ.

—ಸಂಪಾದಕಿ ಮತ್ತು ಸಂಗಾತಿ ಬಳಗ.

### : ನಗೆ ಹನಿ :

ಮೇಷ್ಟ್ರು : ಲೋ ತಿಮ್ಮ ಬಂಗಾರ ಎಲ್ಲಿ ಸಿಗುವುದೋ ?
ತಿಮ್ಮ : ಹೆಣ್ಣು ಮಕ್ಕಳ ಮೈಮೇಲೆ ಸಾರ್.

O O O

ಮೇಷ್ಟ್ರು : ಲೋ ರಂಗ ನಮ್ಮ ದೇಶದ ಎರಡು ಗಡಿ ಹೆಸರಿಸು.
ರಂಗ : ಉಪ್ಪಿನಂಗಡಿ ಮತ್ತು ಬೆಳ್ತಂಗಡಿ ಸಾರ್.

—ಮುಕ್ಕಾಟಿ ಎಲ್. ಸವಿತ, ಮದೆನಾಡು.

[7ನೇ ಪುಟದಿಂದ]

ನೆಂದು ಹೇಳುತ್ತದೆ. ಜೊತೆಗೆ ಭಾಗಮಂಡಲದಲ್ಲಿ ಸೂಳೆಯರ ಮೇಳ ಮಾಡಿಸಿದೆನೆಂದೂ ಹೇಳಿಕೊಳ್ಳುತ್ತದೆ. ಪಾಡ್ದನದಲ್ಲಿ 'ಕಾಶೀಮಠ, ಕದ್ರಿಮಠ, ವಿಟ್ಲೇಲ ಮಠ'ದ ಉಲ್ಲೇಖವೂ ಬರುತ್ತದೆ. ಮ್ಯಾನರ್ ಸಂಗ್ರಹಿಸಿದ 'ಮುಡದೇರ್ ಕಾಲಭೈರವ' ಪಾಡ್ದನದಲ್ಲಿ ನಾಲ್ವರು ಪುರುಷರೊಂದಿಗೆ ಅವರ ಕುಲದೈವ ಕಾಲಭೈರವನು ಬಂದಿದ್ದರ ವರ್ಣನೆಯಿದೆ [ಮ್ಯಾನರ್ 1896 : 27] – ಇವಿಷ್ಟೂ ವಿವರಗಳು 'ಜೋಗಿಗಳ–ಪುರುಷರ–ಕಾಲಭೈರವರ' ಸಂಬಂಧದ ಬಗೆಗೆ ಖಚಿತವಾದ ಸುಳುಹು ನೀಡುತ್ತದೆ.

ಮಧ್ಯಕಾಲೀನ ಕರ್ನಾಟಕದಲ್ಲಿ ನಾಥಸಿದ್ಧ ಪರಂಪರೆಗೆ 'ಸಿದ್ಧಮತ, ಸಿದ್ಧಮಾರ್ಗ' ಎಂಬ ಹೆಸರಿತ್ತು [ಕೃಷ್ಣಮೂರ್ತಿ ಮ.ಸು 1076 : 212–269] ಈ ನಾಥಸಿದ್ಧರು ಕರ್ನಾಟಕದ ಎಲ್ಲ ಜಾತಿ ಜನಾಂಗದವರನ್ನು ತನ್ನ ತೆಕ್ಕೆಗೆ ಒಗ್ಗಿಸಿಕೊಂಡಿದ್ದರು. ಸಿದ್ಧವೇಶದಲ್ಲಿನ 'ಸಿದ್ಧ' ಪದವು ಈ ನಾಥಸಿದ್ಧವನ್ನೇ ಸಂಕೇತಿಸುವುದು ಸ್ಪಷ್ಟವಾಗಿದೆ. ಪುರುಷ ಭೂತ, ಮುಡದೇರ್ ಕಾಳಭೈರವರಲ್ಲಿನ ಉಲ್ಲೇಖವು ಈ ನಾಥಸಿದ್ಧರ ಪರಂಪರೆಗೆ ಸಾಕ್ಷಿಯಾಗಿದೆ. ಹಾಗಾಗಿ ಸಿದ್ಧವೇಶ ಕುಣಿಯುವವರನ್ನು 'ಪುರುಷರ ಮಕ್ಕಳು' ಎಂದು ಕರೆಯುವುದು ಸಹಜವೇ ಆಗಿದೆ. ಆದರೆ 'ಪುರುಷರ ಮಕ್ಕಳೂ' 'ಲಾಕುಳ ಶೈವರು' ಬೇರೆ ಬೇರೆ ಎಂಬುದನ್ನು ಮರೆಯುವಂತಿಲ್ಲ. ಸಿದ್ಧವೇಶದಲ್ಲಿ ಅವು ಒಂದೆಂಬಂತೆ ಕಂಡರೂ ಪುರುಷ ಭೂತವನ್ನು ಗಮನಿಸಿ ಈ ಕೆಳಗಿನ ವ್ಯತ್ಯಾಸವನ್ನು ಗುರುತಿಸಬಹುದು. ಈ ವ್ಯತ್ಯಾಸಗಳು ನಾಥಸಿದ್ಧರಿಗೂ ಕಾಳಾಮುಖ ಇಲ್ಲವೇ ಲಾಕುಳ ಶೈವರಿಗೂ ಇರುವ ವ್ಯತ್ಯಾಸಗಳಿಗೆ ಸೂಚನೆಯಾಗಬಹುದು :

1. ಲಾಕುಳ ಶೈವ ಅಥವಾ ಕಾಳಾಮುಖ ಸನ್ಯಾಸಿಗಳು ದಿಗಂಬರು. ಸಿದ್ಧವೇಶದ ಸನ್ಯಾಸಿಯಲ್ಲಿ ಇದು ಸ್ಪಷ್ಟ. ನಾಥಸಿದ್ಧರ ಪ್ರತಿನಿಧಿ ಎಂಬಂತೆ ತೋರುವ ಪುರುಷಭೂತವು ಲಂಗೋಟಿ ಧರಿಸುತ್ತದೆ.

2. ಲಾಕುಳ ಶೈವ ಸನ್ಯಾಸಿಗಳು ಮಾಂಸಾಹಾರಿಗಳು. ಆದರೆ ನಾಥಸಿದ್ಧರು ಸಸ್ಯಾಹಾರಿಗಳು. ಇದು ಕೂಡ ಅನಂತರದ ಕಾಲಘಟ್ಟದಲ್ಲಿ ಬರುವಂಥದ್ದು. ಏಕೆಂದರೆ ಪುರುಷಭೂತವು ಭಂಗಿ ಸೇವುತ್ತದೆ. ಮಿಗಿಲಾಗಿ ಈ ಸಿದ್ಧರು ಕೂಡ ಪುರೋಹಿತಶಾಹಿಯನ್ನು ಪ್ರತಿಭಟಿಸಿದ ನಿಮ್ನ ಜಾತಿಯವರೇ ಆಗಿದ್ದಾರೆ. ಆದರೆ ಕಾಲಾಂತರದಲ್ಲಿ ಅದು ಮತ್ತೆ ಮಾಂಸಾಹಾರವನ್ನು ಬಿಟ್ಟುಕೊಟ್ಟು ಹೆಚ್ಚು ಶಿಷ್ಟವಾಗಿದೆ. "Some yogis would not eat fish even"...ಎಂದು ಬ್ರಿಗ್ಸನು ಹೇಳಿದ್ದು ಇಲ್ಲಿ ಸ್ಮರಣಾರ್ಹ. (Briggs 1938 :106)

3. ಲಾಕುಳ ಶೈವರು ಕಾಮವನ್ನೇ ಭಗವದಾರಾಧನೆಯ ಮಾರ್ಗಕ್ಕೆ ಮಾಧ್ಯಮವನ್ನಾಗಿ ಬಳಸಿದ್ದರು. ನಾಥಸಿದ್ಧರ ತಾತ್ತ್ವಿಕತೆ ಈ ರೀತಿಯದಲ್ಲವಾದರೂ, ಇವರೂ ಲಾಕುಳ ಶೈವರ ಪ್ರಭಾವಕ್ಕೆ ಬಿದ್ದಂತಿದೆ. ಪುರುಷಭೂತವು ಭಾಗಮಂಡಲದಲ್ಲಿ ಸೂಳೆಯರ ಮೇಳ ಮಾಡಿಸಿದ್ದೇ ಇದಕ್ಕೆ ಸಾಕ್ಷಿ.

4. ನಾಥಸಿದ್ಧರಲ್ಲಿ ಸ್ತ್ರೀಯರಿಗೆ ಕೂಡಾ ಸಮಾನವಾದ ಸ್ಥಾನವಿತ್ತು. ಪುರುಷ ಭೂತಕ್ಕೆ 'ಜವುಳಿಜಂಗಮು'ಳೆಂಬ ತಂಗಿ ಇರುವ ಉಲ್ಲೇಖವೂ ಆ ಭೂತದ ಪಾಡ್ದನದಲ್ಲಿದೆ. ನಾಥಸಿದ್ಧರಲ್ಲಿ ಜೋಗಿಣಿಯರಿದ್ದುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಕಾಳಾಮುಖರಲ್ಲಿ ಸ್ತ್ರೀಯರಿದ್ದುದಕ್ಕೆ ಶಾಸನಾಧಾರಗಳಿದ್ದರೂ ಸಿದ್ಧವೇಶದಲ್ಲಿ ಅದಕ್ಕೆ ಆಧಾರಗಳಿಲ್ಲ. ಹೀಗೆ ಸಿದ್ಧವೇಶದ ಕುಣಿತದಲ್ಲಿ ನಾಥಸಿದ್ಧರೂ ಮತ್ತು ಲಾಕುಳ ಶೈವರು ಒಟ್ಟು ಸೇರಿರುವುದನ್ನು ಕಾಣುತ್ತೇವೆ. ಹೀಗೆ ಒಟ್ಟು ಸೇರಿದ್ದು ಯಾವಾಗ ಮತ್ತು ಅದಕ್ಕೆ ಕಾರಣಗಳೇನೆಂಬುದನ್ನು ವಿವರಿಸಲು ಬೇಕಾದಷ್ಟು ಮಾಹಿತಿಗಳು ಲಭ್ಯವಿಲ್ಲ. 10 ರಿಂದ 14ನೇ ಶತಮಾನದ ಮಧ್ಯೆ ಕರ್ನಾಟಕದಲ್ಲಿ ನಡೆದ ಧಾರ್ಮಿಕ ಕ್ರಾಂತಿಯ ಯಾವುದೋ ಹಂತದಲ್ಲಿ ಇದು ನಡೆದಿರಬಹುದು.

ಸಿದ್ಧವೇಶದಲ್ಲಿ ದಾಸಯ್ಯ ಮತ್ತು ಬ್ರಾಹ್ಮಣ್ಯದ ನಿರಾಕರಣೆಯಿದೆ. ಇದು ವೈಷ್ಣವ ಮತ್ತು ಪುರೋಹಿತಶಾಹಿ ಪರಂಪರೆಯ ನಿರಾಕರಣೆಯೂ ಹೌದು. ಉಚ್ಚವರ್ಗದ ಪಾಂಡಿತ್ಯಪೂರ್ಣ ವಿಚಾರಪರಂಪರೆಗೆ ವಿರುದ್ಧವಾಗಿ ವಿಜೃಂಭಿಸಿದ ವೈದಿಕೇತರ ಸಂಪ್ರದಾಯದ ಪಳೆಯುಳಿಕೆಯಾಗಿ ಇಂದು ಸಿದ್ಧವೇಶ ಉಳಿದಿದೆ. ಇಂದಿಗೂ ಬ್ರಾಹ್ಮಣರಿಂದ ತಿರಸ್ಕೃತವಾದ ಜಾತಿಯ ಜನಗಳೇ ಲಾಕುಳ, ಭೈರವ, ಕಾಳಾಮುಖ, ಕಾಪಾಲಿಕ ಮತ್ತು ಪಾಶುಪತ ಮತಗಳಲ್ಲಿರುವುದನ್ನು ನಾವು ಕಾಣುತ್ತೇವೆ. ಇದನ್ನು ಕೂರ್ಮ ಪುರಾಣವೂ ಸಾರಿ ಹೇಳಿದೆ. [ಕೂರ್ಮ ಪುರಾಣ, ಭೂಮಿಕೆ : 181–185]. 'ಗೀರ್ವಾಣ ಭಾಷೆಗಳ್ ಏಕೆ ಗೊರವಗೆ ?' 'ಅದೇಂ ಗೊರವರ ಡುಂಡುಚಿಯೋ' ಎಂಬಂಥ ಮಾತುಗಳಲ್ಲಿನ ತಿರಸ್ಕಾರದ ಧ್ವನಿ ಕೂಡಾ ಆ ಕಾಲದ ಸಾಮಾಜಿಕ ಜೀವನದ ವಿಷಮತೆಯನ್ನು ಹೇಳುತ್ತದೆ.

ಆಳುವ ವರ್ಗದ ವಿರುದ್ಧ ಸಿಡಿದೆದ್ದು ನಿಂತು ಸಾಮಾನ್ಯ ಜನರ ಧರ್ಮವದು. ಜನಪದದಲ್ಲಿ ಉಳಿದುಬಂದಿರುವ ಈ ತಾತ್ತ್ವಿಕತೆಯು ಮಧ್ಯಕಾಲೀನ ರಹಸ್ಯ ತಾಂತ್ರಿಕ ಪಂಥಗಳ ಬಗೆಗೆ ವಿಶೇಷ ಬೆಳಕು ಚೆಲ್ಲುತ್ತದೆ.

ವರ್ತಮಾನಕಾಲದಲ್ಲಿ ಗೌಡರು ಬ್ರಾಹ್ಮಣಕ್ಕೆ ಅಂಥ ವಿರೋಧಿಗಳೇನೂ ಅಲ್ಲ. ಬದಲಾಗಿ ಹೆಚ್ಚುಹೆಚ್ಚು ಬ್ರಾಹ್ಮಣೀ

ಕರಣಕ್ಕೆ ಒಳಗಾಗುತ್ತಿದ್ದಾರೆ. ಸುಮಾರು ಎರಡು ತಲೆಮಾರಿನಷ್ಟು ಹಿಂದೆ ಗೌಡರ ಮದುವೆಗೆ ವೈದಿಕರ ಅಗತ್ಯ ಇರಲಿಲ್ಲ. ಆದರೆ ಈಚೆಗೆ ಮದುಮಗಳನ್ನು ಧಾರೆ ಹೊಯಿದುಕೊಡುವಾಗ ಬ್ರಾಹ್ಮಣ ಇರಲೇಬೇಕು. ಇಂಥ ಪರಿಸ್ಥಿತಿಯಲ್ಲಿ ಬ್ರಾಹ್ಮಣ್ಯವನ್ನೇ ಲೇವಡಿಮಾಡುವ ಸಿದ್ಧವೇಶವನ್ನು ಗೌಡರು ಉಳಿಸಿಕೊಳ್ಳುವುದಾದರೂ ಹೇಗೆ ? ಇದು ಸಂಸ್ಕೃತಿಯ ದೃಷ್ಟಿಯಿಂದ ಬಹಳ ಕುತೂಹಲಕರವಾದ ಪ್ರಶ್ನೆಗಳನ್ನು ಎತ್ತುತ್ತದೆ ಮತ್ತು ಒಟ್ಟು ಚರ್ಚೆಯನ್ನು ಜಾನಪದದ ತೆಕ್ಕೆಯಿಂದ ಸರಿಸಿಬಿಡುತ್ತದೆ.

ಇಂದು ಸಿದ್ಧವೇಶವು ಪ್ರದರ್ಶನಗೊಳ್ಳುವ ಕಾಲ ಸುಗ್ಗಿ ತಿಂಗಳ ರಾತ್ರಿ. ಹಿಂದೆ ಅದು ಹೀಗೆ ಪ್ರದರ್ಶನಗೊಳ್ಳುತ್ತಿತ್ತೋ ತಿಳಿಯದು. ಈ 'ರಾತ್ರಿ' ಎಂಬುದು ಹಗಲಿಗೆ ವಿರೋಧವಾದುದು ಮತ್ತು ಪೂರಕವಾದುದು. ಅದನ್ನು 'ವಿರೋಧ ದ್ವಂದ್ವ' ಎಂದೂ ಕರೆಯಬಹುದು. ರಾತ್ರಿಯ ಕಲ್ಪನೆ ಇಲ್ಲದವರಿಗೆ ಹಗಲಿನ ಕಲ್ಪನೆಯೂ ಇರಲಾರದು. ಜೊತೆಗೆ ರಾತ್ರಿಯು ಹಗಲಿಗೆ ವಿರೋಧವಾಗಿದ್ದುಕೊಂಡೇ, ಹಗಲಿನ ಮುಂದುವರಿಕೆಗೆ ಸಹಾಯ ಮಾಡುತ್ತದೆ. ಪ್ರಕೃತಿಯ ಈ ಗುಣವು ಮೌಲ್ಯಾತ್ಮಕವಾಗಿಯೂ ನಿಜವಾಗಿವೆ. ಸಾಮಾನ್ಯವಾಗಿ ಹಗಲಿನ ಮೌಲ್ಯ ವ್ಯವಸ್ಥೆಗೆ ವಿರೋಧವಾದ ಮೌಲ್ಯವ್ಯವಸ್ಥೆಯನ್ನು ರಾತ್ರಿ ಒಳಗೊಳ್ಳುತ್ತದೆ. ಹಗಲಿನಲ್ಲಿ ಅಸ್ಪೃಶ್ಯನಾದವನೊಬ್ಬ ರಾತ್ರಿ ಕಾಲದಲ್ಲಿ 'ಭೂತ'ವಾಗಿ ಸವರ್ಣೀಯರ ಮೇಲೆ ಹಿಡಿತ ಸಾಧಿಸಬಹುದು. ಹಗಲು ಉಗುರುತೆಗೆಯಬಹುದು. ರಾತ್ರಿ ತೆಗೆಯಬಾರದು, ಹಗಲು ಬಟ್ಟೆ ಒಗೆಯಬಹುದು, ರಾತ್ರಿ ಕೂಡದು. ಹಗಲು ನಿದ್ರಿಸಬಾರದು. ರಾತ್ರಿ ನಿದ್ರಿಸಬೇಕು. ರಾತ್ರಿ ಹೇಳಲಾಗುವ ಜನಪದಕತೆಗಳಲ್ಲಿ ದಡ್ಡ ಅಳಿಯನಿದ್ದರೆ, ಹಗಲಿನ ವಾಸ್ತವದಲ್ಲಿ ಅಳಿಯನಿಗೆ ಅತಿಯಾದ ಸನ್ಮಾನವೇ ಇರುತ್ತದೆ. ಹಗಲಿನಲ್ಲಿ ನಾವು ಯಾವುದನ್ನು ಮೌಲ್ಯವೆಂದು ಒಪ್ಪಿಕೊಳ್ಳುತ್ತೇವೆಯೋ ಅದೇ ರಾತ್ರಿಯ ಮೌಲ್ಯವೂ ಆಗಿರುವುದಕ್ಕೆ ಬಹಳ ಕಡಿಮೆ ಉದಾಹರಣೆಗಳಿವೆ. ಈ ಹಿನ್ನೆಲೆಯಲ್ಲಿ ಸಿದ್ಧವೇಶವನ್ನು ನೋಡಿದಾಗ, ಸಿದ್ಧವೇಶದ ಕಾರ್ಯದ [Function] ಬಗ್ಗೆ ಸ್ಪಷ್ಟವಾದ ಒಂದು ಚಿತ್ರ ದೊರೆಯುತ್ತದೆ. ರಾತ್ರಿಕಾಲದಲ್ಲಿ ಜನನಾಂಗಗಳನ್ನು ಮುಟ್ಟಿಸಿ ಬ್ರಾಹ್ಮಣನನ್ನು ಅವಮಾನಿಸುವ ಗೌಡರೇ, ಹಗಲಿನಲ್ಲಿ ಬ್ರಾಹ್ಮಣರನ್ನು ಗೌರವಿಸುತ್ತಾರೆ. ಅಂದರೆ ಗೌಡರು ತಮ್ಮ ಸಂಸ್ಕೃತಿ ತಮಗೆ ತಂದಿತ್ತ ಜನಪರ ನಿಲುವನ್ನು ರಾತ್ರಿಕಾಲದಲ್ಲಿ ಅಭಿವ್ಯಕ್ತಿಸುತ್ತಾ ಪ್ರತಿಭಟನೆಯನ್ನು ನಿರಸನಗೊಳಿಸಿಕೊಳ್ಳುತ್ತಾರೆ. ಆ ಮೂಲಕ ಹಗಲಿನ ಸಾಂಪ್ರದಾಯಕ ಮೌಲ್ಯಗಳು ನಿರಾಯಾಸವಾಗಿ ಮುಂದುವರೆಯುವಂತೆ ಮಾಡುತ್ತಾರೆ. ಹೀಗೆ ನೋಡಿದಾಗ ಕ್ರಾಂತಿಕಾರಿ ಕುಣಿತದಂತೆ ಕಾಣುವ ಸಿದ್ಧವೇಶವು, ಒಟ್ಟು ಸಾಂಪ್ರದಾಯಿಕ ಸಮಾಜ ವ್ಯವಸ್ಥೆಗೆ ಹೇಗೆ ಪೂರಕವಾಗಿದೆ ಎಂಬುದೂ ತಿಳಿಯುತ್ತದೆ. ಸಂದರ್ಭದಿಂದ ಪ್ರತ್ಯೇಕಿಸಿ ನೋಡುವಾಗ ಬಹಳ ಪ್ರಗತಿಪರವಾದ ಕುಣಿತದಂತೆ ಕಾಣುವ ಅದು ಸಾಮಾಜಿಕ ಸಂದರ್ಭವೊಂದರಲ್ಲಿ ಪ್ರತಿಗಾಮಿ ಕೆಲಸವನ್ನೇ ನಿರ್ವಹಿಸುತ್ತದೆ. ನಮ್ಮ ಬಹುತೇಕ ಜನಪದ ಕುಣಿತಗಳು ಈ ಚೌಕಟ್ಟಿಗೆ ಸೇರುತ್ತವೆ. ಸಿದ್ಧವೇಶದ ವೃತ್ತಾಕಾರದ ಕುಣಿತವೂ ಕಾಲದ ಬಗೆಗೆ ಚಕ್ರಾಕಾರದ ಕಲ್ಪನೆಯನ್ನೇ ಉಂಟುಮಾಡುತ್ತಿದ್ದು, ಅದೂ ಸಾಂಪ್ರದಾಯಕ ಕಲ್ಪನೆಯನ್ನೇ ಪ್ರಕಟಿಸುತ್ತದೆ.

ಇಷ್ಟಿದ್ದರೂ ಅಪರಿಚಿತ ಲೋಕವೊಂದರತ್ತ ನಮ್ಮ ಗಮನ ಸೆಳೆದು, ಮಧ್ಯಕಾಲೀನ ಗುಪ್ತ ಸಮಾಜಗಳ ಬಗೆಗೆ ಕೆಲವು ಮಾಹಿತಿಗಳನ್ನು ನೀಡುವಲ್ಲಿ 'ಸಿದ್ಧವೇಶ' ತುಂಬ ಸಹಕಾರಿ. ಇಂಥ ಹಲವು ಕುಣಿತಗಳನ್ನು ಒಟ್ಟು ಸೇರಿಸಿ ಅಭ್ಯಾಸ ಮಾಡಿದರೆ ಇತಿಹಾಸದ ಮತ್ತು ವರ್ತಮಾನದ ಬಗೆಗಿನ ನಮ್ಮ ಅರಿವು ಗಮನಾರ್ಹವಾಗಿ ಹೆಚ್ಚುವುದರಲ್ಲಿ ಸಂಶಯವಿಲ್ಲ.

## ಸಿದ್ಧವೇಶದ ಹಾಡು

1 ದುಂಬಿಸಾಲೆ ದುಂಬಿಸಾಲೆ ಸುದ್ಧಬೇಸೋ
2 ಸಿದ್ಧಲಿಂಗ ಮುದ್ದುಲಿಂಗ ,,
3 ನಾವು ಯಾವ ಊರು ಯಾವ ತಳ ,,
4 ನಾವು ಐಗೂರು ತಳದವರು ,,
5 ನಾವು ಐಗೂರು ತಳಕ್ಕಾಗಿ ,,
6 ನಾವು ಕಾಶೀಯ ಮಠದಿಂದ ,,
7 ನಾವು ಕಾಶೀಯ ಮಠಕ್ಕಾಗಿ ,,
8 ನಾವು ಕದಿರೆಯ ಮಠಕ್ಕಾಗಿ ,,
9 ನಾವು ಕದಿರೆಯ ಮಠದಿಂದ ,,
10 ನಾವು ಬಿದಿರೆಯ ಮಠಕ್ಕಾಗಿ ,,
11 ನಾವು ಬಿದಿರೆಯ ಮಠದಿಂದ ,,
12 ನಾವು ಗಾಳಿಯ ಮಠಕ್ಕಾಗಿ ,,
13 ನಾವು ಗಾಳಿಯ ಮಠದಿಂದ ,,
14 ನಾವು ಗೋಳಿಯ ಮಠಕ್ಕಾಗಿ ,,
15 ನಾವು ಗೋಳಿಯ ಮಠದಿಂದ ,,
16 ನಾವು ವಿಟ್ಲೇಲ ಮಠಕ್ಕಾಗಿ ,,
17 ನಾವು ವಿಟ್ಲೇಲ ಮಠದಿಂದ ,,
18 ನಾವು ಅಂಬೆಯ ಮಠಕ್ಕಾಗಿ ,,
19 ನಾವು ಅಂಬೆಯ ಮಠದಿಂದ ,,

20 ನಾವು ತುಂಬೆಯು ಮಠಕ್ಕಾಗಿ ಸುದ್ಧಬೋಸೋ
21 ನಾವು ತುಂಬೆಯು ಮಠದಿಂದ ,,
22 ನಾವು ನೆಕ್ಕಿಯು ಮಠಕ್ಕಾಗಿ ,,
23 ನಾವು ನೆಕ್ಕಿಯು ಮಠದಿಂದ ,,
24 ನಾವು ನೇರಳೆ ಮಠಕ್ಕಾಗಿ ,,
25 ನಾವು ನೇರಳೆ ಮಠದಿಂದ ,,
26 ನಾವು ಶೃಂಗೇರಿ ಮಠಕ್ಕಾಗಿ ,,
27 ನಾವು ಶೃಂಗೇರಿ ಮಠದಿಂದ ,,

[ಸನ್ಯಾಸಿ ಪ್ರವೇಶ]

28 ನಾವು ಹೂವೆಂಗಿ ಮಠಕ್ಕಾಗಿ ,,
29 ನಾವು ಹೂವೆಂಗಿ ಮಠದಿಂದ ,,
30 ನಾವು ಗುರುಪುರ ಮಠಕ್ಕಾಗಿ ,,
31 ನಾವು ಗುರುಪುರ ಮಠದಿಂದ ,,
32 ನಾವು ಹಳ್ಳಿಗೆ ಬಿದ್ದೆವಮ್ಮ ,,
33 ನಾವು ಪುರ್ಸರಾಯರ ಹೆಸರು ಹೇಳಿ ,,
34 ನಾವು ಹತ್ತು ತಾಯಿ ಮಕ್ಕಳಯ್ಯ ಸುದ್ಧಬೋಸೋ
35 ನಾವು ಒಂದೇ ತಾಯಿ ಮಕ್ಕಳಂತೆ ,,
36 ನಾವು ದೇವ್ರ ಮುಂದೆ ಆಡಿಕೊಂಡು ,,
37 ನಾವು ಕಟ್ಟಿಕೊಂಡು ಬಂದೆವಮ್ಮ ,,
38 ನಮ್ಮ ಹಲ್ಲುಕತ್ತಿ ಹನುಮಪ್ಪಯ್ಯ ,,
39 ನಮ್ಮ ಗುಂಡುಕಲ್ಲು ಗುರುವಪ್ಪಯ್ಯ ,,
40 ನಮ್ಮ ಚಟ್ಟಿ ಬತ್ತ ಪಿಟ್ಟಿ ಸಂಕರ ,,
41 ನಮ್ಮ ಬಾರುಕೋಲು ಬಸವಯ್ಯ ,,
42 ನಾವು ಇನ್ನೊಂದೆಡೆ ಹೋಗಬೇಕು ,,
43 ನಮ್ಮ ಕೈಯ್ಯನ್ನಾದ್ರೂ ತುಂಬಿ ಕಳಿಸಿ ,,
44 ನಾವು ವರುಷಕ್ಕೊಮ್ಮೆ ಬರುವರಯ್ಯ ,,
45 ನಾವು ತಾರಾವು ಮಾರಾವಲ್ಲ ,,
46 ನಾವು ಹತ್ತಕ್ಕೊಂದು ತಾರಪೂರ ,,
47 ನಮ್ಮ ಎಂಟಕ್ಕೊಂದು ಘಂಟೆಸರ ,,

ಲೇಖನ : ಡಾ|| ಪುರುಷೋತ್ತಮ, ಬಿಳಿಮಲೆ.

## ಸಾಂಸ್ಕೃತಿಕ ಮೇಳ

ಗೌಡ ಯುವಕ ಸಂಘ [ಕೊಡಗು ಮತ್ತು ದ. ಕ.] ಗಂಗಾನಗರ ಬೆಂಗಳೂರು. ಇವರ ವತಿಯಿಂದ ಇದೇ 1998ರ ದಶಂಬರ ತಿಂಗಳಲ್ಲಿ ಒಂದು ಸಾಂಸ್ಕೃತಿಕ ಮೇಳವನ್ನು ಬೆಂಗಳೂರಿನಲ್ಲಿ ನಡೆಸುವಂತೆ ನಿರ್ಧರಿಸಲಾಗಿದೆ.

ಇದರಲ್ಲಿ ಕೊಡಗು ಮತ್ತು ದ. ಕ. ಗೌಡ ಸಂಸ್ಕೃತಿಗೆ ಸಂಬಂಧಪಟ್ಟಂತೆ ಸೋಬಾನೆ, ಚಿತ್ರಗೀತೆ, ಜಾನಪದಗೀತೆ, ಭಾವಗೀತೆ, ಲಘು ಸಂಗೀತ, ಶಾಸ್ತ್ರೀಯ ಸಂಗೀತ, ದೇವರ ನಾಮ, ಭಕ್ತಿಗೀತೆ.
ಜಾನಪದ ನೃತ್ಯ, ಕೋಲಾಟ, ಸುಗ್ಗಿ ಕುಣಿತ, ಸಿದ್ಧವೇಶ, ಪುರುಷರ ವೇಶ, ಯಕ್ಷಗಾನ, ಭೂತಾರಾಧನೆ, ಆಧುನಿಕ ನೃತ್ಯಗಳು ಹಾಗೂ ಹಾಡುಗಳಿಗೆ ಅವಕಾಶ ಕೊಡಲಾಗುವುದು.

ಇದರಲ್ಲಿ ಭಾಗವಹಿಸಲಿಚ್ಛಿಸುವವರು ತಮ್ಮ ಹೆಸರು, ವಿಳಾಸ ಹಾಗೂ ಭಾಗವಹಿಸಲಿಚ್ಛಿಸುವ ವಿಷಯಗಳ ಬಗ್ಗೆ ವಿವರಗಳನ್ನು ದಿನಾಂಕ 28-11-1998 ರೊಳಗೆ ಈ ಕೆಳಗಿನ ವಿಳಾಸಕ್ಕೆ ತಲುಪಿಸುವಂತೆ ಕೋರಲಾಗಿದೆ.

ಮ್ಯಾನೇಜರ್,
**ಕೊಡಗು ಮತ್ತು ದ. ಕ. ಗೌಡ ಸಮಾಜ**
1ನೇ 'ಸಿ' ಮುಖ್ಯ ರಸ್ತೆ, ಗಂಗಾನಗರ,
[ಭಿನ್ನಿ ಗಾರ್ಮೆಂಟ್ಸ್ ಫ್ಯಾಕ್ಟರಿ ಹಿಂಭಾಗ]
ಬೆಂಗಳೂರು-560 032. ದೂರವಾಣಿ : **3433014**

:—: **ಪ್ರವೇಶ ಉಚಿತ** :—:

ಅಧ್ಯಕ್ಷರು/ಕಾರ್ಯದರ್ಶಿ.

## ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ, ಮಡಿಕೇರಿ

### ಲಾಟ್ರಿ ಫಲಿತಾಂಶ

ತಾ. 21-10-98ರಂದ್ ಮಡಿಕೇರಿಲಿ ಕೈಲ್‌ಮೂರ್ತ ಪಯುಕ್ತ ಏರ್ಪಾಡ್ ಮಾಡ್ದ ಲಾಟ್ರಿ ಫಲಿತಾಂಶ ಈ ಕೆಳ್ಗ್ ಸಂಗೆ ಉಟ್ಟು.

1] 1868-ಜೊಕ್ಕಾಡಿ ಜನಾರ್ಧನ [ಕಂದ] ಅವಂದೂರು
2] 1918-ನಾಡುಮಣೆಯುನ ಶಿಸಿರ, ಕರಿಕೆ
3] 109-ತೋಟಂಬೈಲು ಸಿ. ಮಾದಪ್ಪ, ನರಿಯಂದಡ

—ಸಮಾಧಾನಕರ ಬಹುಮಾನಗ—

1. 5573-ಕುದುಪಜೆ ಭಾನುಮತಿ ಸುಂದರ, ಕರಿಕೆ
2. 5719-ನಡುಗಲ್ಲು ಎಂ. ಹೊನ್ನಪ್ಪ, ಮದೆನಾಡು
3. 3515-ಪಿ.ಕೆ. ಸಣ್ಣಯ್ಯ ಜಿ.ಡಿ.ಸಿ. ಮಡಿಕೇರಿ
4. 3846-ಎಂ.ಬಿ. ಸೂರಜ್
5. 1961-ಪಳ್ಳಿಪುರ ಭರತ್, ವೆಸ್ಟರ್ನ್‌ಫುಡ್ಸ್ ಮಡಿಕೇರಿ

**ವಿ. ಸೂ. :** ಲಾಟ್ರಿ ಬಂದವ್ 21-11-98ರೊಳಗೆ ಟಿಕೆಟ್ ತೋರ್ಸಿ ಅಕಾಡೆಮಿ ಅಧ್ಯಕ್ಷರ್‌ಂದ ಬಹುಮಾನ ಪಡ್‌ಕಣಕು, ದೂರವಾಣಿ : 29802

**—ಅಧ್ಯಕ್ಷ ಮತ್ತೆ ಆಡಳಿತ ಮಂಡಳಿಯವ್**

# ನವಂಬರ್ ತಿಂಗಳು ಪೂರ್ತಿ ಕನ್ನಡ ರಾಜ್ಯೋತ್ಸವ ಆಚರಿಸುವಂತಾಗಲಿ

ಮಾನ್ಯರೇ,

ನವಂಬರ್ ಒಂದರಂದು ಕನ್ನಡಿಗರು ಒಂದಾಗಿ ಬಾಳಲು ಕರ್ನಾಟಕ ರಾಜ್ಯವಾಯಿತು. ಆದಿನ ನಾವೆಲ್ಲ ರಾಜ್ಯೋತ್ಸವ ಆಚರಿಸುತ್ತಾ ಆನಂದಿಸುತ್ತೇವೆ. ಇದಕ್ಕೆ ದಕ್ಷಿಣದ ಕೊಡಗೂ ಹೊರತಾಗಿಲ್ಲ. ಆದರೆ ಇಲ್ಲಿ ಪ್ರತ್ಯೇಕ ರಾಜ್ಯದ ಬೇಡಿಕೆ ಕಾಣಿಸಿ ಕೊಂಡಿದೆ. ಆದರೆ ಅಲ್ಲೂ ಕೂಡಾ ಅದಕ್ಕೆ ಬೆಂಬಲ ಇಲ್ಲ ಎನ್ನುವುದನ್ನು ತಿಳಿದುಕೊಂಡಿರುವ ಮುಖ್ಯಮಂತ್ರಿಗಳು ಕೊಡಗಿನಲ್ಲಿ ನೂರಕ್ಕೆ ತೊಂಬತ್ತು ಜನ ಪ್ರತ್ಯೇಕ ರಾಜ್ಯವಾಗು ವುದನ್ನು ಒಪ್ಪುವುದಿಲ್ಲವೆಂದು ಹೇಳಿಕೆ ನೀಡಿದ್ದಾರೆ. ಇದನ್ನು ರಾಜ್ಯೋತ್ಸವದ ಸಂದರ್ಭದಲ್ಲಿ ಸಾಬೀತು ಪಡಿಸುವುದು ನಮ್ಮೆಲ್ಲರ ಕರ್ತವ್ಯವಾಗಿದೆ.

ಕೊಡಗು ಪ್ರಜಾವೇದಿಕೆ ಜಾತಿ, ಮತ, ಪಕ್ಷ ಭೇದ ಗಳನ್ನು ಮರೆತು ಎಲ್ಲರೂ ಒಂದಾಗಿ ಕೊಡಗಿನ ಎಲ್ಲಾ ಗ್ರಾಮ, ಪೇಟೆ, ಪಟ್ಟಣಗಳಲ್ಲಿ ವಿಜೃಂಭಣೆಯ ರಾಜ್ಯೋತ್ಸವವನ್ನು ನಡೆಸುವುದಕ್ಕಾಗಿ ಶ್ರಮಿಸಿದೆ. ನಮ್ಮ ಜಿಲ್ಲಾ ಸಮಿತಿಯಲ್ಲಿ ವೀರಶೈವ, ಹೆಗ್ಗಡೆ, ಅಮ್ಮ ಕೊಡವ, ಒಕ್ಕಲಿಗ ಗೌಡ ಸಮಾಜ ಗಳ ಜಿಲ್ಲಾಧ್ಯಕ್ಷರು ಅಲ್ಲದೆ ಬ್ರಾಹ್ಮಣ, ಐರಿ, ಕುಡಿಯ, ಕ್ರೈಸ್ತ ಮುಸ್ಲಿಂ ಜನಾಂಗಗಳ ಸದಸ್ಯರು ಸಕ್ರಿಯವಾಗಿ ಭಾಗವಹಿಸು ತ್ತಿದ್ದಾರೆ. ಎಲ್ಲಾ ಪಕ್ಷದ ಮುಖಂಡರು ಕೊಡಗು ಪ್ರಜಾ ವೇದಿಕೆಯನ್ನು ಬೆಂಬಲಿಸುತ್ತಿದ್ದಾರೆ.

ಇದನ್ನು ಹೊಸ ಪ್ರಪಂಚಕ್ಕೆ ತೋರಿಸಲು ರಾಜ್ಯೋತ್ಸವ ಒಂದು ಸದಾವಕಾಶ.

* ಇಡೀ ನವಂಬರ್ ತಿಂಗಳು ಕೊಡಗಿನಲ್ಲಿ ರಾಜ್ಯೋತ್ಸವ ಆಚರಿಸುವಂತಾಗಲಿ.

* ತಿಂಗಳ ಉದ್ದಕ್ಕೂ ಎಲ್ಲಾ ವಾಹನ, ಅಂಗಡಿ, ಆಫೀಸು, ಮನೆಗಳಲ್ಲಿ ಕನ್ನಡ ಬಾವುಟ ಹಾರಾಡಲಿ.

* ಸರಕಾರಿ ಬಸ್, ಬಸ್ಟ್ಯಾಂಡ್, ಕಟ್ಟಡಗಳಲ್ಲಿರುವ ಕೊಡಗು ಪ್ರತ್ಯೇಕ ಘೋಷಣೆಗಳನ್ನು ಅಳಿಸುವ ಕಾರ್ಯ ಸರಕಾರ ಕೈಗೆತ್ತಿಕೊಳ್ಳಲಿ.

* ಕೊಡಗಿನ ಒಳಗೂ ಹೊರಗೂ ಇರುವ ಕೊಡವ, ಗೌಡ ಇತ್ಯಾದಿ ಸಂಸ್ಥೆ ರಾಜ್ಯೋತ್ಸವ ಆಚರಿಸಲಿ.

* ಇದರಿಂದ ಕೊಡಗು ಪ್ರತ್ಯೇಕ ರಾಜ್ಯಕ್ಕೆ ಬೆಂಬಲ ಇಲ್ಲವೆಂದು ಸಾಬೀತಾಗಲಿ.

* ಹೊರ ರಾಜ್ಯದ ರಾಜಕಾರಣಿಗಳಿಗೆ ನೈಜ ಸ್ಥಿತಿ ಗೊತ್ತಾಗಲಿ.

* ಇಲ್ಲಿ ಸ್ವಹಿತಾಶಕ್ತಿಗಳಿಗೆ ಅವಕಾಶ ಇಲ್ಲದಾಗಲಿ.

* ಕೊಡಗಿನಲ್ಲಿ ಸಮನ್ವಯ ಮನೋಭಾವ, ಸರ್ವತೋ ಮುಖ ಅಭಿವೃದ್ಧಿ ಧ್ವನಿ ಮಾಡಲಿ.

* ನವಂಬರ್ ಅಂತ್ಯದೊಳಗೆ ಕೊಡಗಿನ ಸಮಸ್ಯೆ ಅಂತ್ಯ ವಾಗಲಿ.

* ಎಲ್ಲರಿಗೂ ಕಾವೇರಿ ಮಾತೆ ಇದಕ್ಕಾಗಿ ಶ್ರಮಿಸುವ ಸದ್ಬುದ್ಧಿ ಕರುಣಿಸಲೆಂದು ಹಾರೈಸುವ.

—ಎನ್. ಎಸ್. ದೇವಿಪ್ರಸಾದ್, ಸಂಪಾಜೆ
[ಪ್ರಧಾನ ಸಂಚಾಲಕರು, ಕೊಡಗು ಪ್ರಜಾವೇದಿಕೆ]

# ನಮ್ಮ ಸಂಸ್ಕೃತಿನ ಎತ್ತಿ ಹಿಡಿಯಕುತ ಕೇಳಿಕಣೆ

ಮಾನ್ಯರೇ,

ಅಮ್ಮಾಜೀರ ಪೊನ್ನಪ್ಪ ಮತ್ತೆ ಹೊದ್ದೆಟ್ಟ ಭವಾನಿ ಶಂಕರ್ ತಯಾರಿಸಿದ ಧ್ವನಿಸುರುಳಿ ತುಂಬಾ ಲಾಯ್ಕುಟ್ಟು. ಅದರ್ಲಿ ನಮ್ಮ ಸಂಸ್ಕೃತಿ ಬಗ್ಗೆ ತುಂಬಾ ಲಾಯಕ್ಕಾಗಿ ಹಾಡ್ ರೂಪಲಿ ಮಾಡ್ಯೊಳೊ. ಅದೇ ರೀತಿ ಇನ್ನ್ ಹೆಚ್ಚಿಗೆ ಧ್ವನಿ ಸುರುಳಿ ತಯಾರಿಸಿ ನಮ್ಮ ಸಂಸ್ಕೃತಿನ ಎತ್ತಿ ಹಿಡಿಯಕುತ ಕೇಳಿಕಣೆ. ಅಲ್ಲದೆ ಅವ್ಕೆ ಕಾವೇರಮ್ಮನು ಮತ್ತೆ ವೆಂಕಟರಮಣ ಸ್ವಾಮಿ ಇನ್ನು ಹೆಚ್ಚಿನ ಶಕ್ತಿ ಕೊಟ್ಟ್ ಒಳ್ಳದ್ ಮಾಡಲಿತ ನನ್ನ ಬೇಡಿಕೆ.

—ಕಡ್ಲೇರ ಸಂಜ, ಕುಯ್ಯಂಗೇರಿ.

# ಅವಿಸ್ಮರಣೀಯ

ಮಾನ್ಯರೇ,

ದಿನೇ ದಿನೇ ಶುಕ್ಲ ಪಕ್ಷದ ಚಂದಿರನಂತೆ ವೃದ್ಧಿಸುತ್ತಿರುವ ನಿಮ್ಮ ಸಾಧನೆಯು ನಿಜಕ್ಕೂ ಹೆಮ್ಮೆಯ ವಿಷಯ.

ಗೌಡ ಜನಾಂಗದ ಮನೆ ಮನೆಯ ಜೊತೆಗಾತಿ [ಸಂಗಾತಿ] ಯಾಗಿರುವ, ಕಳೆದ ಒಂದೂವರೆ ವರುಷದಲ್ಲಿನ ನಿನ್ನ ಸಾಧನೆಯು ಅವಿಸ್ಮರಣೀಯ !

ಮಣ್ಣಂಡ್ರ ಸಂತೋಷ್ ಈರಪ್ಪ,
ಯುವಕಪಾಡಿ.

## ಅರೆಭಾಷಿಕ ವಿಭಾಗ

## ಪುಟ್ಟಿನ ಪುಟ್ಟ ಕೋರಿಕೆ

ಆಫೀಸ್‌ಂದ ಬಂದ ಸೋಮು ಅಂದ್ ಪೋಸ್ಟ್‌ಲಿ ಬಂದಿದ್ದ ಕೊಡಗು ಸಂಗಾತಿ ಪತ್ರಿಕೆನ ತಕಂಡ್ ಓದಿಕೆ ಸುರು ಮಾಡ್ತ್. ಅಷ್ಟೊತ್ತಿಗೆ ಅಲ್ಲಿಗೆ ಬಂದ ಅಂವನ ಆರ್ ವರ್ಷದ ಮಗಳು ಪುಟ್ಟಿ ಪೊಪ್ಪ ನಿನ್ನನ ಒಂದ್ ಪ್ರಶ್ನೆ ಕೇಳ್ಲಾ.. ಅಂತ ರಾಗ ಎಳ್ತ್. ಈ ಪುಟ್ಟಿ ಯಾಗೋಳು ಹಿಂಗೇ. ವಯಸ್‌ಲಿ ಸಣ್ಣವುಳಾದರೂ ಎಷ್ಟೋ ಸಲ ಅವುಳು ಕೇಳುವ ಪ್ರಶ್ನೆಗಳಿಗೆ ಉತ್ತರ ಕೊಡಿಕಾಗದೆ ಪೇಚಾಡಿಕಣುವ ಹಂಗೆ ಆದೆ. ಅವಳ ಮನ್‌ಸ್‌ಗೆ ಸಮಾಧಾನ ಆಗುವಂತ ಉತ್ತರ ಸಿಗುವವರೆಗೂ ಅವಳ್‌ಂದ ತಪ್ಪುಸಿಕಣಿಕೆ ಆದುಲೆ. ಸಣ್ಣತಿರ್ಲಿ ಸೋಮುನೂ ಹಿಂಗೇ. ಏನಾದರ್ ಹೇಳ್ರೆ ಅದ್ ಯಾಕೆ ? ಹೆಂಗೆ ? ಅಂತೆಲ್ಲ ಪ್ರಶ್ನೆಗಳ್ನ ಕೇಳ್ತಾನೆ ಇರ್ತಿತ್ತ್. ಆಗ ದೊಡ್ಡವು ಎಂತದೂ ಸರಿಯಾಗಿ ಹೇಳದೆ, ನೀ ಹೋಗತ್ತ, ಸುಟ್ಟ ಹರ್ಟೆ. ಹಂಗೆ ಮಾಡ್ಯಾಗದ್‌ಂತೇಳ್ರೆ ಮಾಡ್ಯಾಗದ್ ಅಷ್ಟೇ ಅಂತ ಜೋರು ಮಾಡಿ ಬಾಯಿ ಮುಚ್ಚಿಸ್ತಿದ್ದೊ. ಆದರೆ ಚಾಮೆವ್ವ ಮಾತ್ರ ಹಿಂಗೆಲ್ಲ ಸಿಟ್ಟ್ ಮಾಡಿಕಣದೆ ಸಮಾಧಾನಂದ ಎಲ್ಲ ಹೇಳ್ತಿತ್ತ್. ಹಂಗಾಗಿ ಸೋಮುನ ಹೆಚ್ಚಿನ ಸಮಸ್ಯೆಗಳಿಗೆಲ್ಲ ಚಾಮೆವ್ವನ ಹತ್ರ ಪರಿಹಾರ ಇರ್ತಿತ್ತ್. ಅವುಕೂ ಹೇಳಿಕೆ ಗೊತ್ತಾಗದಿದ್ದಂತಹ ಸಂಗತಿ ಇದ್ದರೆ, ಹಂಗೆ ಮಾಡ್ರೆ ಚಾಮಿ ಕಣ್ಣ್ ತೆಗ್ದ್ ಬುಟ್ಟ ದೆವ್ವ ಅಂತ ಹೇಳ್ತಿದ್ದೊ. ಇನ್ನ್ ಕೇಳುದರ್‌ಂದ ಎಂತ ಪ್ರಯೋಜನನೂ ಇಲ್ಲೆಂತೇಳಿ ಸೋಮು ಸುಮ್ಮಂಗಿರ್ತಿತ್ತ್. ಆದರೆ ಚಾಮೆವ್ವ ಹೇಳ್ತಿದ್ದ ಒಂದೊಂದು ಮಾತೂ ಅಂವನ ಮನ್ಸ್‌ನ ಮ್ಯಾಲೆ ಎಂತಾ ವಳ್ಳೆ ಪರಿಣಾಮ ಬೀರಿಟ್ಟ್‌ಂತೇಳ್ದ್ ಅಂವಗೊಬ್ಬಂಗೇ ಗೊತ್ತು. ಬಾಲ್ಯಲಿ ಮಕ್ಕಳಿಗೆ ಸಾಮಾನ್ಯವಾಗಿ ಪ್ರತಿಯೊಂದು ವಿಷಯಗಳ ಮೇಲೆ ಬಾಳ ಕುತೂಹಲ ಇದ್ದದೆ. ಅವು ಕೇಳುವ ಪ್ರಶ್ನೆಗಳಿಗೆಲ್ಲ ಸಮಾಧಾನದ ಸರಿಯಾದ ಉತ್ತರ ಕೊಟ್ಟರೆ ಅವುಕೆ ಮುಂದಕೆ ಬಾಳ ವಳ್ಳೆ ಪ್ರಯೋಜನ ಆದೆ. ಹಂಗಾಗಿ ಪುಟ್ಟಿ ಕೇಳುವ ಪ್ರತಿಯೊಂದು ಪ್ರಶ್ನೆಗಳಿಗೂ, ಅವುಳಿಗೆ ಸಮಾಧಾನ ಆಗುವಂತೆ ಉತ್ತರ ಕೊಡಿಕೆ ಸೋಮು ಪ್ರಯತ್ನ ಮಾಡ್ತಾ ಇದ್ದದೆ.

ಪೊಪ್ಪ ನಿಮ್ಮದ್ ಇಂಟರ್ ಕ್ಯಾಸ್ಟ್ ಮ್ಯಾರೇಜಾ ? ಅಂತ ಪುಟ್ಟಿ ಕೇಳ್ತ್. ಅಲ್ಲ ದೊಡ್ಡವರ ಬಗ್ಗೆ ಹಿಂಗೆ ಬಾಯಿಗೆ ಬಂದಂಗೆಲ್ಲ ಮಾತಾಡ್‌ಕಾಗದ್ ನೋಡು ಅಂತ ಸೋಮು ಜೋರು ಮಾಡ್ತ್. ಮತ್ತೆ ಪೊನ್ಮ್ಮ ಯಾಕೆ ಅರೆಭಾಷೆ ಮಾತಾಡುದ್ಲೆ ? ಅಂದರೆ ಅರೆಭಾಷೆ ಬಾರದವು ಎಲ್ಲ ನಮ್ಮೊವು ಅಲ್ಲ ಅಂತ ನಿನ್ನ ಲೆಕ್ಕನಾ? ಹಂಗಲ್ಲ ಪೊಪ್ಪ, ನಮ್ಮದೇ ಒಂದು ಭಾಷೆ ಅಂತ ಇರ್ಕ್ಯಾಕನ ಅದರ ಬಗ್ಗೆ ನಾವುಗೆ ಅಭಿಮಾನ ಇರೊಕಾ ಬೇಡಾ? ನಮ್ಮ ಭಾಷೆನ ಮಾತಾಡಿಕೆ ನಾವೇ ನಾಚಿಕೆ ಮಾಡಿಕಂಡರೆ ಇನ್ನ್ ಎಷ್ಟ್ ದಿನ ಅಂತ ಈ ಭಾಷೆ ಉಳಿಯೊದು ಹೇಳ್ ? ನೀನೆ ಹೇಳ್ತಾ ಇದ್ದಿಯಲ, ಭಾಷೆನ ಬಳಸದೆ ಹಿಂದೆ ಇದ್ದಂತಹ ಎಷ್ಟೊ ಉಪಭಾಷೆಗ ಇಂದ್ ಇಲ್ಲದೆ ಆಗುಟು ಅಂತ. ಹಿಂಗೆ ಅರೆಭಾಷೆ ಮಾತಾಡಿಕೆ ಹಿಂಜರ್‌ದರೆ ಇನ್ನ್ ಕೆಲವು ವರ್ಷಲಿ ನಮ್ಮ ಭಾಷೆನ ಕತೆನೂ ಅಷ್ಟೇ. ನೋಡು ಪುಟ್ಟಿ, ನಮ್ಮ ಕೈಲಿರುವ ಐದ್ ಬೆರ್‌ಳ್‌ಗಳೂ ಒಂದೇ ಸಮ ಇಲ್ಲೆ ಹಂಗೆ ಒಬ್ಬೊಬ್ಬರ ನಡವಳಿಕೆ, ರೀತಿ, ನೀತಿ ಎಲ್ಲ ಬ್ಯಾರೆ ಬ್ಯಾರೆ ಆಗಿದ್ದದೆ. ಕೆಲವುಕೆ ಹೊರಗಿನದ್ ಎಲ್ಲ ಮೇಲ್, ನಮ್ಮದ್ ಕೀಳ್ ಎನ್ನುವಂತ ಕಲ್ಪನೆ. ಹಂಗಾಗಿ ನಮ್ಮ ಭಾಷೆ ಮಾತಾಡುದರ್‌ಂದ ನಮ್ಮ ಗೌರವ ಕಮ್ಮಿ ಆದುಂತೇಳುದು ಇವರ ಗ್ಯಾನ. ಅವರ ಗೌರವಸುಡಲಿ ಆತ್ತ್. ನಮ್ಮ ಭಾಷೆ ಎಷ್ಟ್ ಲಾಯಿಕ ಉಟ್ಟ್, ಮಾತಾಡಿಕೆ ಎಷ್ಟ್ ಸುಲ್ಬ. ಇದರ್‌ಲಿ ಕೀಳರಿಮೆ ಬೆಳ್ಸಿಕಣುವಂತದ್ ಎಂತ ಉಟ್ಟ್ ಹೇಳ್ ? ಇದೆಲ್ಲ ಅವುಕೆ ಗೊತ್ತಾದುಲ್ಯಾ ಹೆಂಗೆ ? ಈಗ ನೋಡು ಕ್ಯಾಲಿಫೋರ್ನಿಯಾಲಿ ಇರುವ ನಮ್ಮ ಕಾರಿಯಪ್ಪ ಮಾವನ ಮಕ್ಕ, ಕೆನಡಾಲಿರುವ ಸಣ್ಣ ಬೋಜಪ್ಪನ ಮಕ್ಕ, ಇವೆಲ್ಲ ಫಾರಿನ್‌ಲಿ ಇದ್ದರೂ ಇಲ್ಲಿಗೆ ಬಾಕನ ಎಷ್ಟ್ ಲಾಯಿಕ ಅರೆಭಾಷೆಲಿ ಮಾತಾಡುವೆ. ಅವರ ಮರ್ಯಾದೆಗೆ, ಘನತೆಗೆ ಏನ್ ಕಮ್ಮಿ ಆವ್ರುಟು ಹೇಳ್ ?

ನೀನ್ ಹೇಳುದೂ ಸರಿಯವ್ವ, ನಾವು ಯಾವುದರ್‌ನ ಪ್ರೀತಿಂದ ನೋಡುವೆನೋ ಅಲ್ಲೇ ನಾವುಗೆ ಪೊರ್ಲು ಕಂಡದೆ. ನಮ್ಮ ಭಾಷೆ ಮ್ಯಾಲೆ ನಾವುಗೆ ಪ್ರೀತಿ ಇದ್ದರೆ ಅದ್ ನಾವುಗೆ ಪೊರ್ಲಾಗಿಯೇ ಕಂಡದೆ. ಸುರೂಗೆ ನಮ್ಮ ಮನ್‌ಸ್ ಶುದ್ಧ ಆಕು ಅಷ್ಟೆ. ಮನ್‌ಸ್ ಶುದ್ಧ ಆದರೆ ಅಲ್ಲಿ ಪ್ರೀತಿ ಹುಟ್ಟದೆ. ಭಾಷೆ ಬಗೆಗೆ ಪ್ರೀತಿ ಇದ್ದರೆ ಇಂತಹ ತಪ್ಪು ಕಲ್ಪನೆಗಳಿಗೆಲ್ಲ ಅವಕಾಶ ಆದುಲೆ. ಯಾವ ಭಾಷೆನೂ ಕೀಳಲ್ಲ. ಹಂಗೆ ಯಾವ ಭಾಷೆನೂ ಮೇಲೂ ಅಲ್ಲ. ಹೆಚ್ಚ್ ಹೆಚ್ಚ್ ಭಾಷೆಗಳ್ನ ಕಲ್ತಷ್ಟೂ ವಳ್ಳೆದೇ. ಆದರೆ ನಮ್ಮ ಮೂಲ ಭಾಷೆಯಾದ ಅರೆಭಾಷೆನ ಕಡೆಗಣ್ಸುದು ಮಾತ್ರ ದೊಡ್ಡ ಅಪರಾಧತ ನಾವು ತಿಳ್ಕಣಕು. ಈ ತಿಳುವಳಿಕೆ ಎಲ್ಲವುಕೆ ಬಂದ್ ನಮ್ಮ ಭಾಷೆ ಬಗೆಗೆ ಅಭಿಮಾನ ಬೆಳ್ಸಿಕಂಡರೆ ಮಾತ್ರ ನಮ್ಮ ಭಾಷೆನ ಉಳ್ಸಿ,

[20 ನೇ ಪುಟ ನೋಡಿ]

# ಸುಂದರ ಸುವರ್ಣ ಸ್ವಾತಂತ್ರ್ಯೋತ್ಸವ

1947ರ್ಲ್ಲಿ ಪರಂಗಿಯವು ನಮ್ಮ ದೇಸಂದ ಹೋದಕ್ಕ್ ನಮ್ಗ್ ಸ್ವತಂತ್ರ ಬಾತ್‌ತೇಳಿ ನಾವು ಹೇಳಿಕಂಡವೆ. ಸ್ವತಂತ್ರಕಾಗಿ ಹೋರಾಡ್ದ ಮಹಾತ್ಮಗಾಂಧಿಯವು ನಮಿಗೆ ಸ್ವತಂತ್ರ ಬಂದರೆ ನಾವು ರಾಮನ ರಾಜ್ಯ ಸ್ಥಾಪಿಸಕ್‌ಂತೇಳಿ ಗ್ಯಾನ ಮಾಡ್ಯೊ. ಆದರೆ ಆ ರೀತಿ ಆತ್‌ಲೆ.

ಗಾಂಧೀಜಿ ಬೋಧಿಸಿದ ಅಹಿಂಸೆ ಮತ್ತೆ ಸತ್ಯ ಎಂಬ ಮಾತಿಗೆ ಬೆಲೆ ಇಲ್ಲದಂಗಾವುಟು. ಅಧಿಕಾರದ ಲಾಲಸೆ ಹೆಚ್ಚಾಚ ವುಟು. ದುಡ್ಡಿಗಾಗಿ ಜನ ಏನು ಮಾಡಿಕೂ ಹೇಸುದುಲೇಂ ತೇಳುವ ಸ್ಥಿತಿಗೆ ಬಂದ್ ತಲ್ಪಿಟು. ಅಧಿಕಾರಕ್ಕಾಗಿ ಎಲ್ಲಾ ರಾಜಕೀಯ ಪಕ್ಷಗ ಇನ್ನೊಬ್ಬನ ಅಥವಾ ಇನ್ನೊಂದು ಪಕ್ಷನ ಸೋಲ್ಸಿಕ್ಕಾಗಿ ಸತ್ಯ ಧರ್ಮನ ಮೂಲೆಗೆ ಸೇರಿಸಿ ಅನ್ಯಾಯ, ಅಧರ್ಮಂದ ಗೆದ್ದ್ ರಾಜ್ಯಭಾರ ಮಾಡಕುಂತ್ತೇಳುನ ಹಠಲಿ ಒಳೊ. ಮೋಸ, ವಂಚನೆ, ಲಂಚದ ಮುಖಾಂತರ ಅಧಿಕಾರ ಪಡಿಯಕೆ ಪ್ರಯತ್ನ ಪಡುತೊಳೊ. ಊರ್‌ಲೀ, ರಾಜ್ಯಲಿ ಹಾಗೂ ರಾಷ್ಟ್ರಲಿ ಯಾವ ರಾಜಕೀಯ ಪಕ್ಷನೂ ಜನರ ನಂಬಿಕೆ ಕಳ್‌ಕಂಡ್, ಯಾವ ರಾಜಕೀಯ ಪಕ್ಷಕ್ಕೂ ಬಹುಮತ ಇಲ್ಲದೆ ಪರದಾಡ್ತಾ ಒಳೋ.

ಇದ್ ಯಾಗ ಸರಿಯಾದೆ, ಯಾರ್ ಸರಿಮಾಡಿವೆಂತ ಗೊತ್ತಾದುಲೆ. ಪ್ರಪಂಚದ ಚರಿತ್ರೆನ ಓದಿರೆ ಪ್ರತಿಯೊಂದು ದೇಸಲಿ ಏರ್‌ಪೇರ್ ಆಗ್‌ತಾ ಇರ್ದರ್ನ ನಾವು ಕಾಣಕ್. ಒಂದು ದೇಶದ ಚರಿತ್ರೆಲಿ 50 ವರ್ಷ ಬಾಳ ದೊಡ್ಡದೇನಲ್ಲ. ಈಗಿನ ಈ ಸ್ಥಿತಿ ಹಿಂಗೇ ಮುಂದುವರಿಯದೆ ಒಳ್ಳೆ ಮುಖಂಡರ್ ಬರುವ ಕಾಲನೂ ಇರ್ದ.

ಮ್ಯಾಲೆ ಹೇಳ್ದಂಗೆ ಇದ್ದರೂ ಸ್ವತಂತ್ರ ಸಿಕ್ಕಿದ ಮೇಲೆ ನಮ್ಮ ದೇಶದ ಅಭಿವೃದ್ಧಿನ ಗ್ಯಾನ ಮಾಡ್ರೆ ಬೇಕಾದಷ್ಟ ಆವುಟು. ಸ್ವತಂತ್ರ ಸಿಕ್ಕಿ ಮುಂದೆ ನಮ್ಮ ದೇಸಲಿ ಗುಂಡು ಸೂಜಿ ಸನ ಇಲ್ಲಿ ತಯಾರ್ ಮಾಡ್‌ತ್ತಿತ್‌ತ್ಲೆ. ಈಗ ಇಲ್ಲಿ ಕಾರ್ಖಾನೆಗಳ್ನ ತೆರ್‌ದ್, ಮನ್ಸಂಗೆ ಬೇಕಾದ ಎಲ್ಲಾ ವಸ್ತುಗಳ್ನ ತಯಾರ್ ಮಾಡುವೇ. ಅಲ್ಲದೆ ಪರದೇಸಗಳಿಗೆ ಕಳ್ಸತ್ತಾ ಒಳೊ. ವಾಚ್‌ಂದ ಹಿಡ್ದ್, ಕಾರ್, ಇಮಾನ, ಹಡ್‌ಗ್ ನೀರೊಳಗೆ ಹೋವ ಸಬ್‌ಮೆರಿನ್‌ನವರೆಗೆ ನಮ್ಮ ದೇಸಲೇ ತಯಾರ್ ಮಾಡುದೇ ಅಲ್ಲದೆ ಆಕಾಸಲಿ ಉಪಗ್ರಹಗಳ್ನಸಾ ತಯಾರಿಸಿ ಹಾರಿಸೊಳೊ ಗ್ರಾಮ ಗ್ರಾಮಗಳ್ಲಿ ರಸ್ತೆ ಆವುಟು. ಜನಿಗೆ ಕುಡ್ಪಿ ನೀರ್‌ಗೆ ಬೋರ್‌ವೆಲ್ ಮಾಡ್ಯೊಳೊ, ಹೊಳೆ ನೀರೆಲ್ಲಾ ಸಮುದ್ರಕ್ಕೆ ಹೋದರ ತಡ್ದ್ ನೀರ್‌ಂದ ಬೆಳೆ ಬೆಳ್ಸತ್ತೊಳೊ. ಊರ್‌ಂದ ಊರಿಗೆ ಬಸ್, ರೈಲ್ ಓಡಿಕೆ ಮಾಡ್ಯೊಳೊ. ಗೊಬ್ಬರ ಹಾಕುವ ವಿಧಾನ, ಬೆಳೆಗೆ ಬರುವ ಕಾಯಿಲೆಗಳಿಗೆ ಬೇಕಾದ ಮದ್ದ್‌ನ ಉಪಯೋಗಿಸುವ ವಿಷಯನ ತಿಳಿಸಿಕೆ ಏರ್ಪಾಡ್ ಮಾಡ್ಯೊಳೊ. ಗ್ರಾಮ ಗ್ರಾಮಗಳ್ಲಿ ಇಸ್ಕೂಲು, ಹತ್ರ ಹತ್ರ ಕಾಲೇಜ್‌ಗಳ ತೆರ್ದ್ ಹೈದಂಗೆ, ಗೂಡೆಗ ಪದವಿ ಪಡಿಯಕೆ,ಇಂಜಿನಿಯರ್, ಡಾಕ್ಟರ್‌ಗೆ ಓದಿಕೆ ಕಾಲೇಜ್ ಗಳ ಸ್ಥಾಪಿಸೊಳೊ.

ಇದೆಲ್ಲಾ ಆಭಿವೃದ್ಧಿ ನಮಿಗೆ ಸ್ವತಂತ್ರ ಬಾರದಿದ್ದಿದ್ದರೆ ಆತಿತ್‌ತ್ಲೇಂತೇಳಕ್. 1947 ರ್‌ಂದ ಹಿಂದೆ ಕೊಡ್‌ಗ್‌ಲಿ ಸ್ವತಂತ್ರ ಹೋರಾಟಲಿ ಭಾಗವಹಿಸಿದ ಗಾಡ್‌ಗಳ ನೆನೆಯಕೆ ನಮ್ಮ ಸಮಾಜದವು ಯಾರೂ ಈ ಚಿನ್ನದ ಸ್ವಾತಂತ್ರ ಹಬ್ಬಲಿ ಒಂದುಗೂಡಿ ನೆನೆಸದೇ ಇರ್ದ ಒಂದು ಬೇಜಾರದ ಸಂಗತಿ. ಅದೂ ಅಲ್ಲದೆ ಸ್ವತಂತ್ರ ಹೋರಾಟಗಾರರ್ ಬದ್‌ಕಿದ್ದವಕೂ ಅವುಕೆ ಗೌರವ ಸೂಚಿಸುವ ಕ್ರಮನೂ ನಮ್ಮಲ್ಲಿ ನಡ್‌ತ್ಲೆ. ನಾವು ನಮ್ಮ ಹಿರಿಯವರ್ನ ಮರ್‌ತೇ ಬುಟ್ಟವೆತ್ತೇಳ್ಟಕ್ಕೆ ಇದೇ ಸಾಕ್ಷಿ. ಸ್ವತಂತ್ರ ಸಿಕ್ಕಿದ ಮೇಲೆ ಗೌಡುಗ ವಿದ್ಯೆಲಿ ತುಂಬ ಮುಂದ ವರ್ದೊಳೊ. ಎಷ್ಟೋ ಜನ ಡಾಕ್ಟರ್‌ಗ, ಇಂಜಿನಿಯರ್‌ಗ ಆಗೋಳೊ. ಸುಮಾರ್‌ಜನ ಸಬ್ ಇನ್ಸ್‌ಪೆಕ್ಟರ್‌ಗ, ಡಿವೈಯಸ್‌ಪಿಗ, ಗೆಜೆಟೆಡ್ ಕೆ. ಎ. ಎಸ್., ಐ. ಎ. ಎಸ್. ಆಗೊಳೊ. ಸ್ವತಂತ್ರ ಸಿಕ್ಕಿದರ್‌ಂದ ನಿಡ್ಯಮಲೆ ಸೋಮಣ್ಣನವು ಪಾರ್ಲಿಮೆಂಟ್ ಮೆಂಬರ್ ಆದೋ, ದಿ|| ಕೋರನ ದೇವಯ್ಯನವು ಕೊಡಗ್‌ನ ಡೆಪ್ಯುಟಿ ಸ್ಪೀಕರ್ ಆದೊ. ದಿ|| ಪಾಂಡನ ಸುಬ್ಬಯ್ಯನವು ಎಂ. ಎಲ್. ಎ. ಆದೋ. ದಂಬೆಕೋಡಿ ಚಿಣ್ಣಪ್ಪನವು ಮಂತ್ರಿಗ ಆದೊ. ದೆಂಬೆಕೋಡಿ ಮಾದಪ್ಪನವು ಈಗ ಎಂ. ಎಲ್. ಎ. ಆಗೊಳೊ. ಇದೆಲ್ಲಾ ಸ್ವತಂತ್ರ ಬಂದದರ ಫಲ. ಇದಲ್ಲದೆ ಹಲವಾರ್ ಜನ ಜಿಲ್ಲಾ ಪರಿಷತ್, ತಾಲೋಕು ಬೋರ್ಡ್ ಮೆಂಬರ್‌ಗ ಆದೊ. ಆದರೆ ಯಾರೂ ರಾಷ್ಟ್ರಮಟ್ಟದ ಮುಖಂಡರ್ ಆಗದಿರುದು ಒಂದು ಕೊರತೆ ಉಟ್ಟ್ ○

ಪ್ರೊ|| ಪೂಜಾರಿ ಮೊಣ್ಣಪ್ಪ, ಬೆಂಗಳೂರು.

---

## ಸೂಕ್ತಿ

ದುರಾಸೆಯೇ ಮಾನವ ಎದುರಿಸುತ್ತಿರುವ ಎಲ್ಲ ಸಮಸ್ಯೆಗಳಿಗೂ ಮೂಲ ಕಾರಣ. ಆದರೆ ದೂರದ ಆಸೆಯೇ ಪ್ರಗತಿಗೆ ಮೂಲ.

## ಹುತ್ತರಿ ಹಬ್ಬ ಬಾಕನ

ಎಂತ ಮಾಡ್ದು ಎಂತ ಮಾಡ್ದು ಎಂತ ಮಾಡ್ದುನೆ
ಇಂದ್ ನಾಳೆ ತೇಳಿ ಹುತ್ತರಿ ಹಬ್ಬ ಬಂದೆ ಬುಡ್ತ್‌ನೆ
ಅಟ್ಟ ಹತ್ತಿ ಎಲ್ಲ ಕರಿ ಗುಡ್ಸಿ ಬುಡುನೆ
ಸುಣ್ಣ ಬೇಸಿ ಎಲ್ಲಾ ಗೋಡೆಗೆ ಬಳ್ದ್ ಬಡುನೆ.

ಎಂತ ಮಾಡ್ದು ಎಂತ ಮಾಡ್ದು ಎಂತ ಮಾಡ್ದುನೆ
ಕೊತ್ತ್ ಎಳ್ಟ್ ಯಾಲ ಮಾರಿ ಪಟಾಕಿ ತಾದುನೆ
ಹುತ್ರಿ ಗೆಣ್ಸ್ ಎಳ್ಳಿ ತಂದ್ ಒಂದು ಚಟ್ಟಿ ಗೈಪು ಮಾಡ್ದುನೆ
ಒಂದು ಕೇಜಿ ಬೇಳೆ ತಂದ್ ಒಡೆ ಮಾಡ್ದುನೆ.

ಎಂತ ಮಾಡ್ದು ಎಂತ ಮಾಡ್ದು ಎಂತ ಮಾಡ್ದುನೆ
ಒಂದ್ ಎರ್ಡ್ ಕುಪ್ಪಿ ಕಳ್ಳ್ ನಾವೆ ಕಾಸಿ ಬುಡ್ದುನೆ
ಅಂಗಳ ಕೆರ್ದ್ ಸ್ವಲ್ಪ ಸಗಣಿ ಹಾಕಿ ಬುಡುನೆ
ಐದ್ ತರ ಎಲೆ ತಂದ್ ನಾರ್ಲಿ ಕಟ್ಟಿಬುಡುನೆ.

ಎಂತ ಮಾಡ್ದು ಎಂತ ಮಾಡ್ದು ಎಂತ ಮಾಡ್ದುನೆ
ದೊಡ್ಡ ಮನೆಂದ ಎಲ್ಲವೂ ಸೇರಿ ಗದ್ದೆಗೋದುನೆ
ನೆರೆ ತಂದ್ ಮನೆ, ಹಟ್ಟಿಗೆ ಕಟ್ಟಿ ಬುಡ್ದುನೆ
ಮನೆವು ಎಲ್ಲ ಒಟ್ಟಿಗೆ ಸೇರಿ ಊಟ ಮಾಡ್ದುನೆ.

ಎಂತ ಮಾಡ್ದು ಎಂತ ಮಾಡ್ದು ಎಂತ ಮಾಡ್ದುನೆ
ನಾನ್ ಎರ್ಡ್ ಪೆಗ್ಗ್ ಹಾಕಿ ಟೈಟ್ ಆತ್‌ನೆ
ಊಟಕೆ ಕುದ್ದಲ್ಲಿ ಕುಡ್ದ್ ಬಾರಿ ಜಗಳ ಆತ್‌ನೆ
ಪಟ್ಟೆದಾರನ ಮಜ ನಂಗೆ ಹೊಡಿಕೆ ಬಾತ್‌ನೆ

ಎಂತ ಮಾಡ್ದು ಎಂತ ಮಾಡ್ದು ಎಂತ ಮಾಡ್ದುನೆ
ಬರುವ ವರ್ಷ ನಾವು ಅವರೊಟ್ಟಿಗೆ ಸೇರ್ದು ಬ್ಯಾಡನೆ.

● ತೆಕ್ಕಡ ಬಿ. ಕುಮಾರ,
ಮುತ್ತಾರ್ಮುಡಿ.

## ಹ ನಿ ಗ ವ ನ

ನಮ್ಮ ಬೆಂಗಳೂರ್ ಕಂದ ಹೈದ
ಮೊನ್ನೆ ಊರಿಗೆ ಹೋಗಿರ್‌ಕಾಕನ
ಅಗೆ ನಾಟಿ ಕೆಲ್ಸ ನೋಡಿ, ಅವನಮ್ಮಂಗೆ
ಹೇಳ್ತ್ ವಾಟ್ ಮಮ್ಮಿ
ಹಿಯರ್ ಪಿಕಿಂಗ್
ದೇರ್ ಪ್ರೆಸಿಂಗ್
ಸಿಂಪ್ಲಿ ವೇಸ್ಟಿಂಗ್
ಟೈಂ ಫಾರ್ ದಿಸ್ ಸಿಲ್ಲಿ ಥಿಂಗ್.

—ಗೋವಿಂದಮ್ಮನ ಅ. ಪ್ರವೀಣಕುಮಾರ್

## ಪ್ರಾರ್ಥನೆ : ಶುಭವ ಹರಸ್

ಶುಭವ ಹರಸ್ ತಾಯಿ ಶುಭವ ಹರಸ್
ಸುಖ ಕಡಲೊಳಗೆ ನೀನ್ ನಮ್ಮನಿರಿಸ್ ।
ನಿಂಗಿರುವ ಆ ಸುಖದ ಬಿಂದ್ ಮೂಲೆಲಿ ನೀನ್
ನಾವ್ಗ ಸುಖವನೆ ಕೊಟ್ಟ್ ಅಲ್ಲಿ ಇರಿಸ್ ॥ ಶು ॥

ನಿನ್ನಲುಟ್ಟ್ ನಮ್ಮ ಸುಖ ದುಃಖಗಳ ಲೆಕ್ಕ
ನಿನ್ನ ಕೈಯೊಳಗುಟ್ಟ್ ಇಂದ್ ಈ ಲೋಕ ।
ನೀನೆ ಶಕ್ತಿನ ಕೊಡೊಕು ನೀನೆ ಮುಕ್ತಿನ ಕೊಡೊಕು
ನೀ ಕೊಟ್ಟರಾ ಶಕ್ತಿ ನಾವ್‌ಗದುವೆ ನಾಕ ॥ ಶು ॥

ಸತ್ಯನೆ ಅಡಗಿಂದ್ ದುಖ್ಖಿಸುವ ಈ ಕಾಲ
ಪರಿಸ್ಥಿತಿನ ತಿಳಿಯದೆ ನೀನೆಲ್ಲಿಗೋದೆ
ಕರೆಯದೆನೆ ನೀನಮ್ಮ ಮೊರೆ ಕೇಳಿ ನೀ ಬಂದ್
ಕಾಪಾಡ್ ಎದ್ದೇಳ್ ಸಾಕ್ ನಿದ್ದೆ ॥ ಶು ॥

ಸಾಕಾತೊ ನಿಂಗೆನೂ ಈ ಲೋಕದಾ ಭಾರ
ಎಲ್ಲಿ ಒಳ ಅಣ್‌ಂಗಿನಿ ಎಲ್ಲಿ ಒಳ ತಾಯೇ ।
ನೀನೆಲ್ಲಿಗೋದರೂ ಅಲ್ಲಿನೂ ನಾವಿರುವೊ
ಕೊಡೊಕು ನೀ ಜಾಗಲ್ಲಿ ನಿನ್ನ ಪಾದದಡಿಯೆ ॥ ಶು ॥

ದುಃಖ ಪಡುತೊಳ ನೀನ್ ಜನಾಕೃತ್ಯಗಳ ನೋಡಿ
ತಕ್ಕ ಪಾಠನ ಅವುಕೆ ನೀನ್ ಕಲಿಸ್ ।
ಬಿಕ್ಕಿ ಅಳುದು ನಿನ್ನ ಮಕ್ಕಳೆ ನಾವೂಂತ
ಉಕ್ಕುವಾ ಕಣ್ಣೀರ್ ನೀನೆ ಒರಸ್ ॥ ಶು ॥

● ಹೊದ್ದೆಟ್ಟಿ ಭವಾನಿಶಂಕರ್.

## ಪ್ರೀತಿಯಲ್ಲಿ ರಾಜ್ಯಶಾಸ್ತ್ರ

ನನ್ನವನಾಕೆ,
ಅರ್ಹತೆ ಇಪ್ಪತ್ತೈದ್
ಮೀರಿರ್‌ಕಾಗದ್,
ಈ ಮುಂದೆ ಮೊದುವೆತ
ಹೇಳುವ ಮತ ಚಲಾಯಿಸಿರ್‌ಕಾಗದ್
ಅಥವಾ,
'ಪ್ರೀತಿ' ತೇಳುವ ಚುನಾವಣೆಗೆ
ಸ್ಪರ್ಧಿಸಿರಿಕಾಗದ್
ನನ್ನ ಹೃದಯ ಸಾಮ್ರಾಜ್ಯಲಿ
ವಾಸಿಸ್‌ತ್ತ ಇರೋಕು
ಅರ್ಜಿ ಸಲ್ಲಿಸಿಕೆ ಕಡೇ ತಾರೀಖ್
"ತಾಳಿ, ಗ್ಯಾನಮಾಡಿ ಹೇಳ್ನೆ."

● ಯಾಲದಾಳು ಈ ಚಂದ್ರಕಲಾ, ಮಡಿಕೇರಿ.

[17ನೇ ಪುಟದಿಂದ]

ಬೆಳ್ಸಿಕಣಕು. ಇನ್ನೊಂದು ಬ್ಯಾಜರದ ಸಂಗತಿಂತೇಳ್ರೆ, ಹಿಂದೆಲ್ಲ ಪ್ಯಾಟೆಲಿರೊವ್ಕೆ ಇಂತ ಒಣಪ್ರತಿಷ್ಠೆಗ ಜಾಸ್ತಿಯಾಗಿದ್ದ್ ಅರೆ ಭಾಷೆನ ಮಾತಾಡದೆ ಇರ್ತಿದ್ದೊ. ಈಗ ಎಷ್ಟೋ ಪರವಾಗಿ ಲ್ಲೆತ ಹೇಳಕ್. ಈಗನ ಮಕ್ಕ ತಾವೇ ತಿಳುವಳಿಕೆ ಪಡ್ಕಂಡ್ ಮನೆಗಳ್ಲಿ ಹೆಚ್ಚಾಗಿ ನಮ್ಮ ಭಾಷೆಲೇ ಮಾತಾಡುವೆ. ಆದರೆ ಈಗೀಗ ನಾಡ್‌ಲಿರುವು ಕೆಲವು ಸನ ಈ ಒಣ ಪ್ರತಿಷ್ಠೆನ ಬೆಳ್ಸಿ ಕಂಡ್ ಅವರ ಮಕ್ಕಳಿಗೆ ಅರೆಭಾಷೆ ಕಲ್ಸದುಲೆ.

ಅಲ್ಲ ಪೊಪ್ಪ, ಯಾಕೆ ಹಿಂಗೆಲ್ಲ ಆಗ್ತಾ ಉಟ್ಟುತ ಗೊತ್ತಾದುಲೆ. ಹಿಂಗೆ ಅದರ್ನೆಲ್ಲ ತಡಿಯಕೆ ಬ್ಯಾರೆ ದಾರೀನೇ ಇಲ್ಯಾ? ನಾವೆಂತ ಮಾಡಿಕೆ ಆದೆ ಕೂಸು, ಭಾಷೆ ಮ್ಯಾಲೆ ಪ್ರೀತಿ ಅವರ ಮನ್ಸ್‌ಲೇ ಹುಟ್ಟಿ ಬರೊಕು ಹೊರ್ತು ನಾವೇನ್ ವತ್ತಾಯಂದ ತುಂಬಿಕೇನೂ ಆದುಲೆ. ನೀನ್ ಹಿಂಗೆ ಅಡ್ತಾ ಇರುದರ್‌ಂದೇ ಮೊದುವೆ ಆಗಿ ಇಷ್ಟ್ ವರ್ಷ ಆದ್ರೂ ಇನ್ನೂ ಮೊಮ್ಮಿಗೆ ಅರೆಭಾಷೆ ಕಲ್ಸಿಕೆ ಆತ್ಲೆ. ಇಲ್ಲಿ ಕೇಳ್ ಪೊಪ್ಪ ಈಗ ತಾನೆ ನೀನೇ ಹೇಳ್ದ ಅಲ, ನಮ್ಮ ಕೈಲಿರುವ ಐದ್ ಬೆರ್ಳ್‌ಗಳೂ ಒಂದೇ ಸಮ ಇರ್ದುಲೆತ. ಹಂಗೇ ಕೆಲವು ಜನ ತಾವಾಗಿಯೇ ತಿಳುವಳ್ಕೆ ಪಡ್ಕಂಡ್ ಸುಧಾರ್ಸಿಕಂಡವೆ. ಇನ್ನ್ ಕೆಲವು ಬ್ಯಾರೆ ಯುವು ಹೇಳ್ದರ್ನ ಕೇಳಿಯಾದ್ರೂ ತಮ್ಮ ತಪ್ಪುನ ಸರಿಪಡ್ಸಿ ಕಂಡವೆ. ಇವೆರಡಕ್ಕೂ ಸೇರದ ಮೂರನೆ ವರ್ಗನೂ ಇರ್ದುಲೆತ ನಾನೇನ್ ಹೇಳ್ದುಲೆ. ಅಂತವರ ಲೆಕ್ಕ ಬುಡು. ಅವರ್ನ ಏನೂ ಮಾಡಿಕೆ ಸಾಧ್ಯ ಇರ್‍ಲೆ. ಹೆಂಗಾದ್ರೂ ಮಾಡಿ ನಮ್ಮ ಜಾತಿಲಿ ಹುಟ್ಟಿದ ಮ್ಯಾಲೆ ಅರೆಭಾಷೆ ಬಾರದೆ ಇರ್ದು ಮಾನಗೇಡ್‌ನ ಸಂಗತಿತೇಳ್ದು ನಮ್ಮವರ ಮನ್ಸ್‌ಗೆ ನಾಟುವ ಹಾಗೆ ಮಾಡೊಕು ಅಂದರೆ ಮಾತ್ರ ನಮ್ಮ ಭಾಷೆಗೆ ಉಳಿಗಾಲ ನೋಡು. ಅಯ್ಯೋ ನನ್ನ ಮುದ್ದು ಚಿನ್ನ! ನನ್ನ ಕಂದಂಗಿರುವಂತ ವಳ್ಳ ಬುದ್ಧಿ ನಮ್ಮೊವು ಎಲ್ಲವುಕೂ ಬರ್‍ಲಿ ಅಂತ ನಾನ್ ಆ ಕುಲ ದೇವರು ವೆಂಕಟರಮಣ ಸ್ವಾಮಿನ ಹತ್ರ ಬೇಡಿಕಣೆ. ಅಷ್ಟೇ ಮಾಡ್ರೆ ಸಾಲ್ದ್ ಪೊಪ್ಪ, ಜನಿಗೆ ತಿಳುವಳ್ಕೆ ಮೂಡುವ ಹಂಗೆ ಮಾಡಿಕೆ ನಮ್ಮ ಕೈಲಾದ ಪ್ರಯತ್ನ ಮಾಡೊಕು. ಅದರ್ನ ನೀ ಹೆಂಗೆ ಮಾಡಿಯೋ ಏನೊ! ನಂಗೊತ್ಲೆ. ಒಟ್ರಾಸಿ ನಮ್ಮ ಭಾಷೆನ ಉಳ್ಸಿಕಂಡ್ ಬೆಳ್ಸರೆ ಸಾಕ್‌ಂತೇಳಿ ಪುಟ್ಟಿ ಹೋಂ ವರ್ಕ್ ಮಾಡಿಕೆ ಹೋತು.

— ಚಾಂಗನ ಚಂ. ಪೂವಯ್ಯ ಮೊಣ್ಣಂಗೇರಿ.

## ಸಮರ್ಪಯಾಮಿ

ಪೊಪ್ಪ, ಅಮ್ಮ ಮಕ್ಕ ಎಲ್ಲಾ ಸೇರಿಕಂಡ್ ಗದ್ದೆಲಿ ಬೇಲಿ ಕಟ್ಟಿ ತರಕಾರಿ ತೋಟ ಮಾಡ್ದೊ ಆ ಉರಿ ಬಿಸ್ಲಲಿ ಗದ್ದೆನ ಎಳ್ಳಿ, ಸಾಲ್ ಹೊಡ್ದ್, ಮೆಣ್ಸ್ ಗಿಡ, ಸ್ವಾಂತೆ, ಹೀರೆ, ಬೆಂಡೆ, ಬದನೆ, ಮೂಲಂಗಿ, ಕರೆಸಾಲ್‌ಲಿ ಜೋಳ ಎಲ್ಲಾ ಹಾಕಿದೊ. ನೀರ್ ಹೊಯ್ಯದು, ಗೊಬ್ಬರ್ ಹಾಕುದು, ತೋಟ ಕರೆಗೆ ದನ, ಹಂದಿ ಎಲ್ಲಾ ಬಾಕನ ಬೆರ್ಸದು ಇದೆ ಕೆಲ್ಸ. ತರ್ಕಾರಿ ಎಲ್ಲಾ ಲಾಯ್ಕ ಬೆಳ್ದ್ ಬಾತ್ ದಾರಿಲಿ ಹೋಕನ ಒಂದು ಆಂಟೆ ಇನ್ನೊಂದು ಆಂಟೆನ ಕೇಳ್ತ್ ಇದ್ ಯಾರ್ದ್ ಅಕ್ಕಾ ತರಕಾರಿ ತೋಟ, ಒಳ್ಳ ಲಾಯ್ಕ ಉಟ್ಟಲ್ಲಾತ. ಇದ್ ನಮ್ಮ ಹೊಸಮನೆ ಅಕ್ಕಂದ್‌ತ ಇನ್ನೊಂದು ಆಂಟೆ ಹೇಳ್ತ್. ಅಷ್ಟೊತ್ತಿಗೆ ಆ ಆಂಟೆ ಸುರ್ ಮಾಡ್ತ್. ನಮ್ಮ ಇವು ಒಳೊ, ಯಾಗ ನೋಡ್ರೂ ಹೆಂಡ ಕುಡ್ದ್ ಅಲ್ಲಿ-ಇಲ್ಲಿ ವಾಲಾಡುವೆ. ತರ್ಕಾರಿ ಗಿಡಕ್ಕೆ ನೀರ್ ಹೊಯ್ಯಲೆ, ಗೊಬ್ಬರ ಅಂತೂ ತೋರ್ಸ ದುಲೆ. ನಂಗೆ ಅಂತೂ ಮನೆ ಕೆಲ್ಸ ತೀರ್ದುಲೆ ಹೋಗಿ ಹೋಗಿ ಇವರ್ನ ಕಟ್ಟಿಕಂಡೊಳೆಲ್ಲಾ, ನನ್ನ ಕರ್ಮತ ಹೇಳ್ತ್. ಹಿಂಗೆ ಕಷ್ಟ ಸುಖ ಎಲ್ಲಾ ಮಾತಾಡಿ ಪೋಯಲ್ಲಾ ಅಕ್ಕಾ ತೇಳಿ ಹೋರ್ರ್ಯೊ. ಸುಮಾರ್ 5 ಗಂಟೆ ಹೊತ್ತ್‌ಗೆ ವಾಣಿ ಗೂಡೆ ಅಂಗಳಲಿ ನಿತ್ತ್ ಗದ್ದೆ ಕಪೆ ನೋಡ್ತ್. ನೋಡ್ನನ ಹತ್ರದ ಮನೆಯವರ ದನಗ ತರ್ಕಾರಿ ತೋಟಲಿ ಬೇಲಿ ಮುರ್ದ್ ಗಿಡಗಳ ತಿಂದ್, ಮೆಟ್ಟಿ, ಸಗಣಿ ಹಾಕಿ ತಲೆ ಎತ್ತಿ ನೋಡುವೆ. ವಾಣಿ ಬಂದ್ ದನಗಳ ಬೆರ್ಸಿತ್. ಮತ್ತೆ ಇವ್ಳು ಸೇಂಕಿಕಂಡ್ ಓಡಿ ಬಂದ್ ಪೊಪ್ಪ ಅಮ್ಮನ ಹತ್ರ ಬಂದ್ ಅಮ್ಮ-ಪೊಪ್ಪ ಎಲ್ಲಾ ಸಮರ್ಪಯಾಮಿ ಆಗುಟುತ ಹೇಳ್ತ್. ಅಷ್ಟೊತ್ತಿಗೆ ಅಮ್ಮ ಜೋರ್ ಮಾಡ್ತ್. ಎಂತದ್‌ನೆ ಸರಿ ಹೇಳ್ಕ ಆಲೆ ನಿಂಗೆತ ಬೈತ್. ಇವ್ಳುಗೆ ಸಿಟ್ಟ್ ಒಂದ್ ಕಡೆ, ನಗೆ ಒಂದ್ ಕಡೆ ಬರ್ತುಟ್ಟ ಮತ್ತೆ ಹೇಳ್ತ್ ತರ್ಕಾರಿ ತೋಟಕೆ ದನಗ ನುಗ್ಗಿ ಸಮರ್ಪಯಾಮಿ ಮಾಡಿಯೊಳೊ.

—ಕುಂಜಿಲನ ರಾಜ, ಮಡಿಕೇರಿ.

## ಓದುಗರಲ್ಲಿ ವಿನಂತಿ

ಈ ಸಂಚಿಕೆಯಲ್ಲಿ ನಿರಂತರವಾಗಿ ಮೂಡಿ ಬರುತ್ತಿರುವ ಎಂ.ಇ. ಮೊಹಮ್ಮದ್‌ರವರ ಅರೆಭಾಷಿಕ ಜನಪ್ರಿಯ ಧಾರವಾಹಿ "ಕರಿ ಚಿನ್ನ" ಕಾರಣಾಂತರವಾಗಿ ಮೂಡಿ ಬರಲಿಲ್ಲ. ಆದ್ದರಿಂದ ಓದುಗರು ಸಹಕರಿಸ ಬೇಕಾಗಿ ವಿನಂತಿ.

—ಸಂಪಾದಕಿ

**ದಿನಾಂಕ 13-9-1998 ರಂದು ಬೆಂಗಳೂರಿನ ಅಮ್ಮಾಜೀರ ಪೊನ್ನಪ್ಪನವರ ಕಾವೇರಿ ನಾಡಿನ ಕೈಲ್ ಮುಹೂರ್ತ ಸಮಾರಂಭದಲ್ಲಿ ನಡೆದ ಸಾಂಸ್ಕೃತಿಕ ಕಾರ್ಯಕ್ರಮಗಳ ಒಂದು ದೃಶ್ಯ**





ಭಾಗಮಂಡಲ ತಂಡದವರಿಂದ ಅಜ್ಜಿ ಸಡಗರ ಎಂಬ ಕಿರು ರೂಪಕ





ಐಕೊಳ ತಂಡದವರಿಂದ ಕೋಲಾಟ

K.R.N.N. 240

10-01-96 TCI Kar. 09592

# ನವ ದಂಪತಿಗಳಿಗೆ ಶುಭವಾಗಲಿ

ನಿಮ್ಮಿಬ್ಬರ ಈ ಬಂಧನ
ಜನುಮ ಜನುಮದ ಅನುಬಂಧವಾಗಿರಲಿ
ನಿಮ್ಮ ವೈವಾಹಿಕ ಜೀವನವು ಸರ್ವರೀತಿಯಿಂದಲೂ ಸುಖಕರವಾಗಿರಲಿ
ವೆಂಕಟೆರಮಣನ ಕೃಪೆ ನಿಮ್ಮ ಮೇಲೆ ಸದಾ ಇದ್ದು ಕಾಪಾಡಲಿ
ನಿಮ್ಮ ಬದುಕಿನ ಸುಗಂಧಮಯ ಪರಿಮಳ ಸಮಾಜದೆಲ್ಲೆಡೆ ಹರಡಲಿ
ನಿಮ್ಮ ಒಳ್ಳೆಯ ಗುಣನಡತೆಯಿಂದ, ಸಾಧನೆಯಿಂದ
ನಕ್ಷತ್ರಗಳಂತೆ ಕಂಗೊಳಿಸಿ ಕುಟುಂಬದವರ,
ಗೌಡ ಜನಾಂಗದವರ ಹಿರಿಮೆಯನ್ನು ಮೆರೆಯಿರಿ.

ಕೊಡಗಿನ ಸಂಗಾತಿಯರಾದ



ಡಾ॥ ನೆರಿಯುನ ಎಸ್. ನವೀನ್, ಎಂ. ಬಿ. ಬಿ. ಎಸ್.
ಡಾ॥ ನೆರಿಯುನ ರಾಜೇಶ್ವರಿ ನವೀನ್, ಎಂ. ಬಿ. ಬಿ. ಎಸ್.
(ವಿವಾಹ 1–10–1998)

ನೆರಿಯುನ ಸೋಮಯ್ಯ ಮತ್ತು ಕುಟುಂಬದವರು ಹಾಗೂ ಬಂಧು–ಮಿತ್ರರು

Printed by M K Thammaiah and Published byKodagu Sangathi on behalf of Pattada P. Sheelamani and Printed at ASHIRWAD PRINTERS 180/A, 6th Main, Vinayakanagar, Mysore-12 Published at Mysore, Editor PATTADA P SHEELAMANI, No 35 1st Cross, 4th Block Near Divisional Telephone Office) Jayalakshmipuram, Mysore-570 012 Phone : 516771